## ಸವಿತಾ ನಾಗಭೂಷಣ

೧೯೬೧ರ ಮೇ ೧೧ರಂದು ಚಿಕ್ಕಮಗಳೂರಿನಲ್ಲಿ ದಯಾನಂದ ಪೈ-ಸರಸ್ವತಿ ದಂಪತಿಗಳ ಮೊದಲ ಮಗಳಾಗಿ ಜನಿಸಿದ ಸವಿತಾ ನಾಗಭೂಷಣ, ಬೆಳೆದದ್ದು ಹಾಗೂ ಶಿಕ್ಷಣ ಪಡೆದದ್ದು ಶಿವಮೊಗ್ಗದಲ್ಲಿ. ಬಿ. ಕಾಂ ಹಾಗೂ ಇತಿಹಾಸ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಇವರು ೧೯೮೪ರಿಂದ ಸುಮಾರು ೨೦ ವರ್ಷಗಳ ಕಾಲ ಅಂಚೆ ಇಲಾಖೆಯಲ್ಲಿ ಸೇವೆ ಸಲ್ಲಿಸಿದ ನಂತರ ಸ್ವಯಂ ನಿವೃತ್ತಿ ಪಡೆದು,ಈಗ ಪತಿ ಡಿ. ಎಸ್. ನಾಗಭೂಷಣ ಅವರೊಂದಿಗೆ ಶಿವಮೊಗ್ಗದಲ್ಲಿ ನೆಲೆಸಿದ್ದಾರೆ.

ವಿಚಾರಗಳ ಭಾರವಿಲ್ಲದಂತೆ ಅಂತಃಕರಣದಿಂದ ಬರೆಯುವ ಸವಿತಾ ಸಾಮಾನ್ಯ ಓದುಗ ಹಾಗೂ ವಿಮರ್ಶಕರಿಬ್ಬರ ಗಮನವನ್ನೂ ಸೆಳೆದಿದ್ದಾರೆ. 'ನಾ ಬರುತ್ತೇನೆ ಕೇಳು', ಚಂದ್ರನನ್ನು ಕರೆಯಿರಿ ಭೂಮಿಗೆ', 'ಹೊಳೆ ಮಗಳು' ಹಾಗೂ 'ಜಾತ್ರೆಯಲ್ಲಿ ಶಿವ' ಎಂಬ ನಾಲ್ಕು ಕವನ ಸಂಕಲನಗಳನ್ನು ಹೊರತಂದಿರುವ ಇವರು ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಪಡೆದ ಮೊದಲ ಕವಯಿತ್ರಿಯಾಗಿದ್ದಾರೆ. ಇವರ 'ಸ್ತ್ರೀ ಲೋಕ' (೧೯೯೬) ಕಾದಂಬರಿ ಕೂಡಾ ಒಂದು ವಿಶಿಷ್ಟ ಪ್ರಯೋಗವೆನಿಸಿದ್ದು ಹಲವು ಪುರಸ್ಕಾರಗಳನ್ನು ಪಡೆದು, ಸಾಹಿತ್ಯ ವಲಯದಲ್ಲಿ ಬಹು ಚರ್ಚಿತವಾಗುತ್ತಿರುವ ಕೃತಿಯಾಗಿದೆ.

ಸವಿತಾ ನಾಗಭೂಷಣ 'ಮುಡಿ ಮಲ್ಲಿಗೆ' ಎಂಬ ಮಹಿಳಾ ಸಾಹಿತ್ಯ ಸ್ಪಂದನ ಸಂಪುಟವನ್ನು ಸಂಪಾದಿಸಿದ್ದು, 'ಸಾಹಿತ್ಯ ಸಂವಾದ' ನಿಯತಕಾಲಿಕದ ಸಂಪಾದಕರಾಗಿಯೂ ಕೆಲಕಾಲ ಕೆಲಸ ಮಾಡಿದ್ದಾರೆ.

# ಕಾಡು ಲಿಲ್ಲಿ ಹೂವುಗಳು

(ಕವನ ಸಂಕಲನ)

ಸವಿತಾ ನಾಗಭೂಷಣ

ರೂಪ
ಪ್ರಕಾಶನ
ಮೈಸೂರು

KAADU LILLI HOOVUGALU-an anthology of poems by Smt. Savitha Nagabhushana, HIG-5, 'Nudi' KHB colony,Kallahalli Extn., Vinoba Nagara, Shimoga-577204. Phone: 08182-248574, Mobile: 94492 42284. Published by: Roopa prakashana, B-21, upstair, Mallige road, Kuvempu Nagara, Mysore-570023. Phone: 93422 774331,98442 12231. Cover design: Sudhakar darbe.  First impression:2006 Pages: 272.
Price: Rs.150/-

ಕಾಡು ಲಿಲ್ಲಿ ಹೂವುಗಳು
(ಸವಿತಾ ನಾಗಭೂಷಣ ಅವರ ಈವರೆಗಿನ ಕವನಗಳು)
ಪ್ರಕಾಶನ:ರೂಪ ಪ್ರಕಾಶನ,ಬಿ.೨೧,ಮಲ್ಲಿಗೆ ರಸ್ತೆ,ಕುವೆಂಪುನಗರ, ಮೈಸೂರು-೫೭೦೦೨೩
ಪ್ರಥಮ ಮುದ್ರಣ:೨೦೦೬
ಪುಟಗಳು:೨೭೨
ಬೆಲೆ: ರೂ.೧೫೦/-

ಅಕ್ಷರ ವಿನ್ಯಾಸ:ರೂಪ ಗ್ರಾಫಿಕ್ಸ್,ಮೈಸೂರು.
ಮುಖಪುಟ ವಿನ್ಯಾಸ: ಸುಧಾಕರ ದರ್ಬೆ
ಲೇಖಕಿಯ ಭಾವ ಚಿತ್ರ: ಎ. ಎನ್. ಮುಕುಂದ್

ಮುದ್ರಕರು:ಗಾಯತ್ರಿ ಎಂಟರ್‌ಪ್ರೈಸಸ್,ಮೈಸೂರು.

# ಚಂದ್ರನ ಬೆಂಬತ್ತಿ...

ಉಣಲು ಹೊಟ್ಟೆ ತುಂಬಾ ಕುಸುಬಲಕ್ಕಿಯ ಗಂಜಿ, ಉಡಲು ಎರಡು ಜೊತೆ ಬಟ್ಟೆ, ಬೀಸುಗಾಲು ಹಾಕಿ ಊರ ತುಂಬಾ ಅಲೆಯುತ್ತಿದುದರಿಂದ ಕಣ್ತುಂಬಾ ನಿದ್ದೆ, ನಾಲಗೆಯ ಮೇಲೆ ಅ. ಆ. ಇ. ಈ...ಇಷ್ಟರ ಮಟ್ಟಿಗೆ ಭಾಗ್ಯವಂತಳಾದುದರಿಂದ ನಾನು ಕವಿಯಾದೆ. ಶಿವಮೊಗ್ಗೆಯ ನದಿ, ಬೆಟ್ಟ ಗುಡ್ಡ, ಗಾಳಿ, ಬೆಳಕು, ಬಿಸಿಲು-ಮಳೆ, ಸಾಲು ಮರಗಳು, ಬಣ್ಣ ಬಣ್ಣದ ಚಂದದ ಹೂವುಗಳು, ಇಗೋ ನಾವೇ ನಿನ್ನ ಕವಿತೆಗಳು ಎಂದು ಕಣ್ಮನ ಸೆಳೆದವು. ಕುವೆಂಪು ಕಂಡದ್ದು ಹೆಗ್ಗಾಡು ನನ್ನ ಪಾಲಿಗೆ ಉಳಿದದ್ದು ಚೂರೇ ಚೂರು!

ಚಿಕ್ಕಂದಿನಿಂದಲೇ ಕಾಯಿಲೆಯಿಂದ ನರಳುತ್ತಾ ಸದಾ ಕಣ್ಣೀರಿಡುತ್ತಿದ್ದ ಅಳುಮುಂಜಿ ತಮ್ಮ, ಮುದ್ದು ಮಾತುಗಳಿಂದ ಅವನ ನೋವು ಮರೆಸುತ್ತಿದ್ದ ಅಜ್ಜಿ, ಅನೇಕ ಸಂಕಷ್ಟಗಳ ನಡುವೆ 'ತಲ್ಲಣಿಸದಿರು ಕಂಡ್ಯಾ ತಾಳು ಮನವೆ' ಎಂದು ಹಾಡುತ್ತಿದ್ದ ತಾಯಿ, 'ಭಿಕ್ಷೆ ಬೇಕಾದರೂ ಬೇಡಿ, ಆದರೆ ಮೋಸ-ದಗಾ-ವಂಚನೆ ಮಾಡದಿರಿ' ಎಂದು ಎಚ್ಚರಿಸುತ್ತಿದ್ದ ತಂದೆ; ಆಸೆ-ಕನಸು-ಭರವಸೆ ಇದೇ ಬದುಕಾಗಿ, ಬದುಕಿನ ದಾರಿಯಲಿ ಬೆಂಗಾವಲಾಗಿ ಬಂದ ನೂರಾರು ಜೀವಗಳು- ಕವಿತೆ ಯಾಕೆ? ಹೇಗೆ? ಯಾರಿಗಾಗಿ? ಎಂಬುದನ್ನು ಕಲಿಸಿಕೊಟ್ಟವು. ಕೊಳೆತ ನಾರು, ಬೇರು, ಎಲೆ, ಹೂವು, ಹಣ್ಣು, ಕ್ರಿಮಿ, ಕೀಟ, ಮಲಿನವಾದ ಗಾಳಿ, ನೀರು, ಮಣ್ಣು, ಬೆಳಕಿನ ಸಂಸರ್ಗದಲ್ಲೇ ಮೊಳೆತ ಬೀಜ ನೀಡುವುದು ಜಗಕೆ ಮತ್ತೊಂದು, ಮಗದೊಂದು ಪರಮ ಪರಿಮಳದ ಹೂವು.... ಅದಲ್ಲವೆ ಕವಿತೆ? ಹೀಗೆ ಭಾವಿಸಿದ್ದು, ಅನುಭವಿಸಿದ್ದು, ಹೊರಹೊಮ್ಮಿದ್ದು ನನ್ನ ಕವಿತೆ.

ನನ್ನೊಳಗೆ ಕವಿತೆಯ ಬೀಜ ಮೊಳಕೆಯೊಡೆದದ್ದು ಬಹುಶಃ ಎರಡನೆಯ ಇಯತ್ತೆಯಲ್ಲಿ. 'ಎಲ್ಲಿ ಹೋದರೂ...ಚಂದ್ರ ನನ್ನೊಂದಿಗೇ ಓಡಿ ಬರುತ್ತಾನೆ, ನಾನು ನಿಂತರೆ ಅವನೂ ನಿಲ್ಲುತ್ತಾನೆ, ಓಡಿದರೆ ಅವನೂ ಓಡುತ್ತಾನೆ' ಎಂದು ಅಚ್ಚರಿ-ಸಂಭ್ರಮದಿಂದ ಓಡೋಡಿ ಬಂದು ಒಂದು ರಾತ್ರೆ ಅಮ್ಮನಿಗೆ ಹೇಳಿದೆ.ಆದರೆ ನನ್ನಮ್ಮ 'ಇಷ್ಟು ದೊಡ್ಡವಳಾಗಿದ್ದೀಯಾ... ತಮ್ಮನನ್ನು ನೋಡಿಕೊಳ್ಳುವುದು ಬಿಟ್ಟು, ಚಂದ್ರನ ಬೆನ್ನು ಹತ್ತಿದ್ದೀಯಾ...ನಾಚಿಕೆಯಾಗುವುದಿಲ್ಲವೆ ನಿನಗೆ?' ಎಂದು ರೇಗಿದಳು. ಇದು ನನ್ನ ಕವಿ ಕಲ್ಪನೆಗೆ ಸಿಕ್ಕ ಪ್ರಥಮ ಬಹುಮಾನ! ಏಳು ವರುಷದ ಬಾಲೆಯಾದ ನನಗೆ ಅಮ್ಮನ ಮಾತು ಎಷ್ಟು ನಾಟಿತೆಂದರೆ, ಆ ಕ್ಷಣದಲ್ಲೇ ನಾನು ಭರ ಭರ ಬೆಳೆದು ದೊಡ್ಡವಳಾದೆ. ಅಜ್ಜಿಯಂತೆ ತಮ್ಮನನ್ನು ಸಂತೈಸಲು ತೊಡಗಿದೆ...ಸೀಮೆಎಣ್ಣೆ ಕ್ಯೂನಲ್ಲಿ, ರೇಶನ್ ಅಂಗಡಿಯಲ್ಲಿ, ಮದ್ದಿನ ಚೀಟಿ ಹಿಡಿದು ಔಷಧಿ ಅಂಗಡಿಯಲ್ಲಿ... ಸೊಂಟಕ್ಕೆ

ಪುಟ್ಟ ಕೊಡಪಾನ... ನನಗಾಗಿಯೇ... ಪುಟ್ಟ ಈಳಿಗೆ ಮಣೆ... 'ಗೋವಿನಂತಹ ಹುಡುಗಿ!?' -ಎಲ್ಲರಿಂದ ಪ್ರಶಂಸೆಯ ಸುರಿಮಳೆ!!

ನನ್ನ ಬಾಲ್ಯದ ಸಂಗಾತಿ, ದೊಡ್ಡಮ್ಮನ ಮಗಳು ಸುಮನ ಇಂಗ್ಲೀಷ್ ಮೇಜರ್ ಓದುತ್ತಿದ್ದು...ಇಂಗ್ಲೀಷ್‌ನಲ್ಲಿ ಕೆಲವು ಪದ್ಯಗಳನ್ನು ಬರೆದು ಅವುಗಳನ್ನು ನನ್ನ ಮುಂದೆ ಓದುತ್ತಿದುದರಿಂದ ಅದು ನನಗೆ ಇಷ್ಟವಾಗಿ, ಪದ್ಯ ಎಂದರೆ ಇಂಗ್ಲೀಷ್‌ನಲ್ಲೇ ಬರೆಯಬೇಕೇನೋ, ಹಾಗೆ ಬರೆದರೇ ಅದಕ್ಕೆ ಬೆಲೆಯೇನೋ ಎಂದು ಭಾವಿಸಿ, ಅವಳನ್ನು ಅನುಕರಿಸಲೋಸುಗ ನನಗೆ ಬರುತ್ತಿದ್ದ ಅರಬರೆ ಇಂಗ್ಲೀಷ್‌ನಲ್ಲೇ... ಚಂದ್ರನನ್ನು ಕುರಿತು ಹೀಗೆ ಬರೆದೆ:

**My Window Companion**

I peeped thro' the window at the sky
Searching there with my eye
I saw stars on high
They seemed to me so nigh
But I could'nt tell you why
I left them with a sigh

I lost my window companion
who shared my every pain;
He who shared my joys;
He who heard my sorrows
Where is he? cried I
None could answer, so did I sigh

The days passing, I was searching
Till I met my window companion
He laughed at me with pride,
While I stood like a bride.
The stars did smile then
As they shared joys of mine.

ಈ ಪದ್ಯವನ್ನು ೧೯೭೭ರಲ್ಲಿ ನಾನು ಪ್ರಥಮ ಪಿಯುಸಿಯಲ್ಲಿದ್ದಾಗ ಕಾಲೇಜಿನ ಮ್ಯಾಗಜೀನ್‌ನಲ್ಲಿ ಪ್ರಕಟಿಸಿದೆ. ಇದನ್ನು ನೋಡಿ ನನ್ನಕ್ಕ, ಈ ಪದ್ಯ ನೀನೇ ಬರೆದದ್ದೇನು?

ಎಂದು ಕೇಳಿ ಖಚಿತಪಡಿಸಿಕೊಂಡಳು. ವ್ಯಾಕರಣವನ್ನು ಇಂಗ್ಲೀಷ್ ಮಾಸ್ತರರಾದ ಜೋಸೆಫ್ ತಿದ್ದಿದ್ದಾರೆ, ಪದ್ಯ ನನ್ನದೇ ಎಂದೆ. ಶಹಭಾಸ್‌ಗಿರಿ ಸಿಕ್ಕಿತು. ತದನಂತರ ಮತ್ತೆ ಅವಳನ್ನೇ ಅನುಕರಿಸಿ, ಪದ್ಯವನ್ನು ಕೈ ಬಿಟ್ಟು ಸಣ್ಣ ಪುಟ್ಟ ಕಥೆಗಳನ್ನು ಬರೆದು ಕೆಲವು ಪ್ರಕಟವಾಗಿ, ಹಲವು ವಾಪಸು ಬಂದು ನಿರಾಶೆಗೊಂಡರೂ, *ಚಿತ್ರ ಕವನ* ('ತುಷಾರ') *ಕಲ್ಪನೆ* ('ಮಯೂರ') ಮುಂತಾದವುಗಳು ನಾನು ಬರೆದಾಗೆಲ್ಲ ಬಹುಮಾನಿತವಾಗಿ ಪ್ರಕಟವಾಗುತ್ತಿದುದರಿಂದ, ನಾನು ಕಾವ್ಯಕ್ಕೇ ಲಾಯಕ್ಕು ಎಂದು ತೀರ್ಮಾನಿಸಿ ಪುಟ್ಟ ಪುಟ್ಟ ಪದ್ಯಗಳನ್ನು ಬರೆಯಲು ಶುರುಮಾಡಿದೆ.

೧೯೮೭ರಲ್ಲಿ ನನ್ನೂರಿನಲ್ಲಿ ತುಂಗೆಯಲ್ಲಿ ಪ್ರವಾಹ:

ಪ್ರವಾಹದ ಜತೆ ಎಲ್ಲವೂ
ಕೊಚ್ಚಿಕೊಂಡು
ಹೋಯಿತೆಂದರೆ ತಪ್ಪಾದೀತು
ನನ್ನ ಕನಸುಗಳಿನ್ನೂ
ಹಸಿ ಹಸಿಯಾಗಿವೆ
ಸೂರಿನಡಿ ಬಿದ್ದಿರುವ
ಪಿತಿ ಪಿತಿ ಮಣ್ಣಿನಲ್ಲಿ

-ಇದು ನಾನು ಬರೆದ ಪ್ರಥಮ ಕನ್ನಡ ಚುಟುಕು ಪದ್ಯ. 'ಪ್ರಜಾವಾಣಿ'ಯಲ್ಲಿ ಪ್ರಕಟವಾಯಿತು. ಈ ನನ್ನ ಸಣ್ಣ ಪ್ರಯತ್ನಕ್ಕೇ ಬೆಂಬಲ ಸಿಕ್ಕಿದ್ದರಿಂದ ಇಂತಹವುಗಳನ್ನೆ ಆಗಾಗ್ಗೆ ಬರೆದೆ. ಅವು ಬೆಳಕೂ ಕಂಡವು. ನಾನು ಕವಿ ಹೌದೋ ಅಲ್ಲವೋ ಎಂಬ ತಳಮಳದಲ್ಲಿದ್ದಾಗ ಸಿಕ್ಕವರು ನಾಗಭೂಷಣ. 'ನೀನು ಹುಟ್ಟು ಕವಿ, ಬರಿ' ಎಂದರು. ಅಷ್ಟೇ ಸಾಕಾಯಿತು ನನಗೆ! ಅವರ ಸಹವಾಸದಲ್ಲಿ ನೂರಾರು ಕನ್ನಡ ಕವಿಗಳನ್ನು ಓದಿದೆ. ಅಂಜುತ್ತ ಅಳುಕುತ್ತ ನನಗೆ ತೋಚಿದಂತೆ ಕವಿತೆ ಬರೆದೆ. ಮುಂದೆ ಸಾಥಿಯಾದವರು ನಾಗಭೂಷಣ ಅವರ ಅನೇಕ ಸಮಾಜವಾದಿ ಮಿತ್ರರು. ಅವರು ನನ್ನ ಕವಿತೆಗೆ ಬೇರೆ ತೆರೆನಾದ ಚೌಕಟ್ಟು ಒದಗಿಸಿದರು. ನನ್ನ ಜೊತೆಗಾತಿಯರೂ ಆದ ಅವರ ಮಡದಿಯರ, ನನ್ನ ಹತ್ತು ಹಲವು ಗೆಳತಿಯರ, ನಾನು ಒಡನಾಡಿದ ಅನೇಕ ಹೆಣ್ಣು ಮಕ್ಕಳ ಬದುಕು-ಬವಣೆಗಳಿಗೆ ನನ್ನ ಕಾದಂಬರಿ 'ಸ್ತ್ರೀ ಲೋಕ'ದಲ್ಲಿ ಜಾಗಮಾಡಿಕೊಟ್ಟೆ.

ನಾನೇನು ಉಂಡೆನೋ ಅದನೇ ಸಹೃದಯ ಓದುಗರಿಗೆ ಉಣಿಸಿರುವೆ. ಅವರಿಗೆ

ಈ ಉಣಿಸು ಅಷ್ಟಿಷ್ಟು ಪ್ರಿಯವಾದದ್ದರಿಂದಲೇ ಇದೀಗ ನನ್ನ ಈವರೆಗಿನ ನಾಲ್ಕು ಕವನ ಸಂಕಲನಗಳ ಸಂಗ್ರಹ ಒತ್ತೊಟ್ಟಿಗೇ 'ಕಾಡು ಲಿಲ್ಲಿಯ ಹೂವುಗಳು' ನಿಮ್ಮ ಮುಂದಿದೆ. ನನ್ನ ಬರವಣಿಗೆಯ ಬದುಕಿನಲ್ಲಿ ಮಹತ್ವದ ಪಾತ್ರ ವಹಿಸಿದ ಗುರು ಸಮಾನರಾದ ಶ್ರೀ ಜಿ. ಎಸ್. ಶಿವರುದ್ರಪ್ಪ, ಶ್ರೀ ಕೆ. ಎಂ. ಶಂಕರಪ್ಪ ಹಾಗೂ ಶ್ರೀ ದೇವನೂರ ಮಹಾದೇವ ಇವರಿಗೆ ಈ *ಕಾಡು ಲಿಲ್ಲಿಯ ಹೂವು* ಗಳನ್ನು ಅರ್ಪಿಸಿದ್ದೇನೆ.

ಈ ಸಂಕಲನಕ್ಕೆ ಮುನ್ನುಡಿಯ ರೂಪದಲ್ಲಿ ಪ್ರವೇಶ ಒದಗಿಸಿರುವ ಭರವಸೆಯ ವಿಮರ್ಶಕಿ ಡಾ|| ಎಂ. ಎಸ್. ಆಶಾದೇವಿ ಹಾಗೂ ಈ ಸಂಗ್ರಹ ಪ್ರಕಟಿಸುತ್ತಿರುವ ಶ್ರೀ ಯು.ಎಸ್.ಮಹೇಶ್, ರೂಪ ಪ್ರಕಾಶನ, ಮೈಸೂರು ಇವರಿಗೂ,ನಾನು ಕೃತಜ್ಞಳಾಗಿದ್ದೇನೆ.ಅಲ್ಲದೆ ನನ್ನನ್ನು ತಿದ್ದಿ ಬೆಳೆಸಿದ ಅನೇಕ ಗೆಳೆಯ ಗೆಳತಿಯರಿಗೆ ಸಮಕಾಲೀನ ಕವಿ-ಕವಯತ್ರಿಯರಿಗೆ, ಸಹೃದಯ ಓದುಗರಿಗೆ ನಾನು ಸದಾ ಋಣಿ.

ನನ್ನ ಈವರೆಗಿನ ಕವನಗಳ ಈ ಸಂಗ್ರಹ ಹೊರ ಬರಲು ಕಾರಣರಾದ ಬಂಜಗೆರೆ ಜಯಪ್ರಕಾಶರಿಗೂ,ಈ ಸಂಗ್ರಹಕ್ಕೆ ಅರ್ಥಪೂರ್ಣ ಮುಖಪುಟ ವಿನ್ಯಾಸ ಮಾಡಿಕೊಟ್ಟಿರುವ ಸುಧಾಕರ ದರ್ಬೆಯವರಿಗೂ ನನ್ನ ಕವನ ಸಂಗ್ರಹಗಳನ್ನು ಈ ಮೊದಲು ಪ್ರಕಟಿಸಿದ ಅಕ್ಷರ ಪ್ರಕಾಶನ, ಸಾಗರ; ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ; ಪರಿಸರ ಪ್ರಕಾಶನ, ಶಿವಮೊಗ್ಗ ಹಾಗೂ ಆಯ್ದ ನೂರು ಕವಿತೆಗಳನ್ನು (*ಆಕಾಶ ಮಲ್ಲಿಗೆ*) ಪ್ರಕಟಿಸಿದ ದಿ. ನೆಲಮನೆ ದೇವೇಗೌಡ, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ- ಇವರಿಗೆಲ್ಲ ಈ ಸಂದರ್ಭದಲ್ಲಿ ನನ್ನ ನೆನಕೆಗಳು

ಹಿರಿಯರ ಹರಕೆ, ಕಿರಿಯರ ಪ್ರೀತಿ ನನ್ನನ್ನು ಮುನ್ನಡೆಸಿವೆ. ಎಲ್ಲರಿಗೆ ವಂದನೆ.

೬-೧೨-೨೦೦೬ -ಸವಿತಾ ನಾಗಭೂಷಣ

ಶಿವಮೊಗ್ಗ

# ಬದುಕಿನ ಕೊಂಡ ಹಾಯುವ ಧಾರಣ ಶಕ್ತಿಯ ಹುಡುಕಾಟ

ಕಾವ್ಯವೆನ್ನುವುದು 'ಬೀದಿಯ ಪಸರ'ವೂ , 'ತಗರ ಹೊರಟೆ'ಯೂ ಆಗಿಬಿಡುತ್ತಿದೆಯೇನೋ ಎನ್ನುವ ಆತಂಕ ಎಲ್ಲ ಕಾಲದ ಕಾವ್ಯ ಪ್ರೇಮಿಗಳನ್ನೂ ಕಾಡುತ್ತಿರುತ್ತದೆ. ಇಂತಹ ಸನ್ನಿವೇಶದಲ್ಲಿ 'ಕಾವ್ಯ ಧ್ಯಾನ'ದ ಬಗ್ಗೆ ನಂಬಿಕೆ ಹುಟ್ಟಿಸುತ್ತಿರುವ ಕವಿಗಳಲ್ಲಿ ಸವಿತಾ ನಾಗಭೂಷಣ ಮುಖ್ಯರು. ಇಷ್ಟಾಗಿ ಸವಿತಾ ಸೇರಿದಂತೆ ಕನ್ನಡದ ಮುಖ್ಯ ಕವಯತ್ರಿಯರ ಕಾವ್ಯದ ವಿಭಿನ್ನ ನೆಲೆಗಳನ್ನು ಕುರಿತು ವಿಸ್ತೃತ ಚರ್ಚೆ ನಡೆದಿಲ್ಲವೆಂದೇ ಹೇಳಬೇಕು. 'ಮಹಿಳಾ ಸಾಹಿತ್ಯ' ಎನ್ನುವ ವರ್ಗೀಕರಣವನ್ನು ಪ್ರತಿಪಾದಿಸುವುದು ಈ ಮಾತಿನ ಉದ್ದೇಶವಲ್ಲ. ಬದಲಿಗೆ, ಮುಖ್ಯವಾಹಿನಿ ವಿಮರ್ಶೆಯು ಇನ್ನೂ ಸ್ಥಾಪಿತ ಗ್ರಹಿಕೆಗಳಿಂದಲೇ ಲೇಖಕಿಯರನ್ನು ಅರ್ಥೈಸಲು ಪ್ರಯತ್ನಿಸುತ್ತಿದೆ ಎನ್ನುವ ಅರ್ಥದಲ್ಲಿ.

ಲೇಖಕಿಯರನ್ನು ಚರ್ಚಿಸುವ ಹಲವು ಅಧ್ಯಯನ ಮಾದರಿಗಳು ರೂಪುಗೊಂಡಿವೆ. ಬಹುಮುಖ್ಯವಾಗಿ ಮತ್ತು ಸಾಮಾನ್ಯವಾಗಿ ಬಳಕೆಯಾಗುವ ಮೂರು ನೆಲೆಗಳೆಂದರೆ: ೧. ಸ್ತ್ರೀ ವಿಶಿಷ್ಟ ಅನುಭವ ಮಾದರಿಗಳ ನೆಲೆ ೨. ಸ್ತ್ರೀವಾದಿ ಸಿದ್ಧಾಂತಗಳ ನೆಲೆ ೩. ಕಾವ್ಯ ಮೀಮಾಂಸೆಯ ನೆಲೆ. ಸ್ತ್ರೀವಾದಿ ಚಿಂತಕರೂ ಸೇರಿದಂತೆ ಇಂದು ಕನ್ನಡ ವಿಮರ್ಶಕರ ಎದುರಿಗಿರುವ ಸವಾಲೆಂದರೆ ಈ ಮೂರು ಮಾದರಿಗಳ ಒಳ ಹೆಣಿಗೆಗಳ ನೆಲೆಯೊಂದನ್ನು ರೂಪಿಸುವುದು. ಸಮಕಾಲೀನ ಸಂದರ್ಭದಲ್ಲಿ ಈ ಪ್ರಯತ್ನಕ್ಕೆ ಅಪಾರ ಮಹತ್ವವಿದೆ. ಲೇಖಕಿಯರನ್ನು ವರ್ಗೀಕರಣದಾಚೆಗೆ ತಂದು ಚರ್ಚಿಸಲು ಅಗತ್ಯವಾದ ಸೈದ್ಧಾಂತಿಕ ಹಿನ್ನಲೆಯನ್ನು, ತಳಹದಿಯನ್ನು ಈ ಒಳ ಹೆಣಿಗೆಗಳ ನೆಲೆ ಕಟ್ಟಿಕೊಡುತ್ತದೆ. ಈತನಕ ಬಹುತೇಕ ಸಂದರ್ಭಗಳಲ್ಲಿ ಈ ಮೂರು ನೆಲೆಗಳನ್ನು ಸಮಾನಾಂತರ ರೇಖೆಗಳೆಂದೇ ತಿಳಿಯಲಾಗುತ್ತಿತ್ತು.

ಪ್ರಧಾನಧಾರೆ ವಿಮರ್ಶೆಯು, ಸ್ತ್ರೀ ವಿಶಿಷ್ಟ ಅನುಭವ ಮಾದರಿಗಳ ನೆಲೆಯಲ್ಲಿ ಲೇಖಕಿಯರನ್ನು ಚರ್ಚಿಸುವುದರಲ್ಲಿ ಆಸಕ್ತಿಯನ್ನು ಇನ್ನೂ ಕಳೆದುಕೊಂಡಿಲ್ಲ. ಆದರೆ ಕುತೂಹಲಕರವಾದ ಬೆಳವಣಿಗೆಯೆಂದರೆ, ಇತ್ತೀಚಿನ ದಿನಗಳಲ್ಲಿ ಪ್ರಧಾನಧಾರೆ ವಿಮರ್ಶೆಯು ಸ್ತ್ರೀವಾದಿ ಸಿದ್ಧಾಂತಗಳ ನೆಲೆಯನ್ನು ಸ್ತ್ರೀ ವಿಶಿಷ್ಟ, ಅನುಭವದ ನೆಲೆಗೆ ಬಗ್ಗಿಸಿಕೊಳ್ಳಲು, ಒಗ್ಗಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಈ ಪ್ರಯತ್ನಗಳ ಅಧ್ಯಯನವೂ ಮುಖ್ಯವೆಂದೇ ತೋರುತ್ತದೆ. ಯಾಕೆಂದರೆ ಈ ಬಗೆಯ ಅಧ್ಯಯನಗಳು ಲಿಂಗ ರಾಜಕಾರಣದ ಮೂರ್ತ-ಅಮೂರ್ತ ಕಾರ್ಯಮಾದರಿಗಳ ಬಗ್ಗೆ ಅನೇಕ

ಸಂಗತಿಗಳನ್ನು ಹೇಳುತ್ತದೆ. ಪ್ರಧಾನಧಾರೆ ವಿಮರ್ಶೆಯು ಸ್ತ್ರೀ ವಿಶಿಷ್ಟ ಅನುಭವದ ಮಾದರಿಗಳನ್ನು ಇತರ ಲೇಖಕರ 'ಲೋಕಾನುಭವ ದರ್ಶನ'ದ ಜೊತೆಗೆ ಇಡದೆ, ಅಂಚಿನಲ್ಲಿ ಇಡುತ್ತದೆ. ಅದನ್ನು ವಿಶಿಷ್ಟವೆಂದೇ ಗುರುತಿಸುತ್ತಲೇ, ಅದು ಸೀಮಿತ ಅನುಭವಗಳ ಲೋಕ ಎಂದು ಗುರುತಿಸುವುದರಲ್ಲಿಯೇ ಅದಕ್ಕೆ ಹೆಚ್ಚಿನ ಆಸಕ್ತಿ. ಹೀಗಾಗಿ ಸಹಜವಾಗಿಯೇ ಅನುಭವಗಳ ಶ್ರೇಣೀಕರಣವೂ ಇಲ್ಲಿ ಘಟಿಸಿ, ಅದೊಂದು ಮಾನದಂಡವೂ ಆಗಿ ಬಿಡುತ್ತದೆ.

ಹಾಗೆಯೇ ಸ್ತ್ರೀವಾದಿ ಸಿದ್ಧಾಂತಗಳ ಹಿನ್ನಲೆಯಲ್ಲಿ ಚರ್ಚಿಸುವಾಗಲೂ ಸಾಮಾನ್ಯವಾಗಿ ಚರ್ಚೆಗೆ ಎತ್ತಿಕೊಳ್ಳುವುದು ಸಾಂಸ್ಕೃತಿಕ ಸ್ತ್ರೀವಾದವನ್ನೇ. ಸಾಂಸ್ಕೃತಿಕ ಸ್ತ್ರೀವಾದವು ಸ್ತ್ರೀ ವಿಶಿಷ್ಟ ಲಕ್ಷಣಗಳನ್ನು ಮತ್ತು ಅನುಭವಗಳನ್ನು ಹೆಚ್ಚಿನ ಒತ್ತು ಕೊಟ್ಟು ಚರ್ಚಿಸುತ್ತದೆ ಎನ್ನುವುದು ನಿಜ. ಆದರೆ ಇದರ ಹಿಂದಿನ ಖಚಿತ ನಿಲುವು ಮತ್ತು ಉದ್ದೇಶವೆಂದರೆ, ಈ ಲಕ್ಷಣಗಳನ್ನು ಲಿಂಗ ತಾರತಮ್ಯದ ಹಿನ್ನಲೆಯಲ್ಲಿ ಲಿಂಗ ಸಮಾನತೆಯನ್ನು ಸಾಧಿಸುವ ದೃಷ್ಟಿಯಿಂದ ಹೆಣ್ಣಿನ 'ಶಕ್ತಿ ಕೇಂದ್ರ'ಗಳಾಗಿ ಬದಲಾದ ದೃಷ್ಟಿಕೋನದಲ್ಲಿ ಗುರುತಿಸುವುದು. ಆದರೆ ಮುಖ್ಯವಾಹಿನಿ ವಿಮರ್ಶೆಯು ತೊಡಕೆಲ್ಲಿದೆಯೆಂದರೆ, ಅದು ಈ 'ಶಕ್ತಿ ಕೇಂದ್ರ'ಗಳನ್ನು ಸ್ತ್ರೀ ವಿಶಿಷ್ಟ ಅನುಭವಗಳ ವೈಭವೀಕರಣವೆಂದೇ ನೋಡಲು ಬಯಸಿ, ಅದನ್ನು ಸ್ತ್ರೀವಾದದ, ಅಂತಿಮವಾಗಿ ಹೆಣ್ಣಿನ ಮಿತಿಯೆಂದೇ ಚರ್ಚಿಸಲು ಯತ್ನಿಸುತ್ತದೆ. ಸಹನೆ, ವಾತ್ಸಲ್ಯ, ಅಂತಃಕರಣ, ಮಾತೃತ್ವ... ಮುಂತಾದವುಗಳು ಅಲ್ಲಿ ಮತ್ತೆ ಮತ್ತೆ ಚರ್ಚೆಗೆ ಒಳಗಾಗುತ್ತವೆ. ಮುಖ್ಯವಾದ ಸಂಗತಿಯೆಂದರೆ, ಈ ಎಲ್ಲ ಮೌಲ್ಯಗಳನ್ನೂ, ಗುಣ ವಿಶೇಷಗಳನ್ನೂ ಕುರಿತಂತೆ ಹೆಣ್ಣಿನ ಗ್ರಹಿಕೆಯಲ್ಲಾಗಿರುವ, ಆಗುತ್ತಿರುವ ಬದಲಾವಣೆಯು, ಹೆಣ್ಣಿಗೆ ತಂದುಕೊಡಬಹುದಾದ ಆತ್ಮವಿಶ್ವಾಸವನ್ನು ಗ್ರಹಿಸುವಲ್ಲಿ ಪ್ರಧಾನಧಾರೆ ವಿಮರ್ಶೆಯು ಸೋಲುತ್ತದೆ. ಹೆಣ್ಣಿನ ಸಂವೇದನೆಯಲ್ಲಿ ಆಗುತ್ತಿರುವ ಈ ಪಲ್ಲಟಗಳನ್ನು ಗುರುತಿಸಬೇಕಾಗಿರುವುದೇ ಲೇಖಕಿಯರನ್ನು ಕುರಿತು ಚರ್ಚಿಸಲು ನಾವು ರೂಪಿಸಬೇಕಾದ ನೆಲೆ ಎಂದೂ, ಈ ನೆಲೆಯಿಂದಲೇ ಲೇಖಕಿಯರ ಸ್ಥಾನ ನಿರ್ದೇಶನ ಮಾಡಲು ಅಗತ್ಯವಾದ ಹೊಸ ಪರಿಕರಗಳೂ, ಪರಿಕಲ್ಪನೆಗಳೂ ಲಭ್ಯವಾಗುತ್ತವೆ ಎಂದೂ ನಾನು ನಂಬಿದ್ದೇನೆ.

೨

ಸವಿತಾರ ಕಾವ್ಯದ ಬಗ್ಗೆ ಬರೆಯಲು ಹೊರಟು 'ಮೂಗುತಿ ಭಾರ'ದ ಈ ದೀರ್ಘ ಪೀಠಿಕೆಯನ್ನು ಹಾಕಿಕೊಂಡದ್ದು, ನಮ್ಮ ಸಂದರ್ಭವನ್ನು ಸ್ಪಷ್ಟಪಡಿಸಿಕೊಳ್ಳುವ ದೃಷ್ಟಿಯಿಂದ. ಸವಿತಾ ನಾಗಭೂಷಣರ ಕಾವ್ಯದ ಮೂಲಭೂತ ಲಕ್ಷಣವೇ ನಾನು

ಪೀಠಿಕೆಯಲ್ಲಿ ಹೇಳ ಹೊರಟ ಎಲ್ಲ ಸಂಗತಿಗಳಿಗೂ ಅತ್ಯುತ್ತಮ ಉದಾಹರಣೆ. ಕಳೆದ ತಲೆಮಾರಿನ ನಮ್ಮ ಲೇಖಕಿಯರಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತಿದ್ದ ಅಂಶವೆಂದರೆ 'ನಾನು ಹೆಣ್ಣು' ಮತ್ತು ಹೆಣ್ಣಾಗಿರುವುದರ ಕಷ್ಟ, ಪರಂಪರೆಗಳ ವಿವರಗಳು. ಸವಿತಾರ ಮೊದಲ ಸಂಕಲನ 'ನಾ ಬರುತ್ತೇನೆ ಕೇಳು'ವಿನಲ್ಲಿಯೇ ಈ ವಿವರ ಕಾಣೆಯಾಗಿದೆ. ಹೆಣ್ಣೂ ಸೇರಿದಂತೆ ಶೋಷಿತ ವರ್ಗದ ಬಹಳ ದೊಡ್ಡ ಸವಾಲೆಂದರೆ, 'ತನ್ನ ಘನತೆ'ಯಲ್ಲಿ ನಂಬಿಕೆಯನ್ನು ಕಟ್ಟಿಕೊಳ್ಳುವುದು. ಈ 'ಆತ್ಮ ಗೌರವ'ದ ಸಂಪಾದನೆ ಕಷ್ಟ, ಸಾಹಸದ ನಿರಂತರ ಪ್ರಯಾಣ. ಲೋಕ ತನ್ನನ್ನು ಇನ್ನೂ ಅನುಮಾನದ, ಗೊಂದಲದ, ಹತ್ತಿಕ್ಕುವ ಹೊಸದಾರಿಗಳ ಹುಡುಕಾಟದ ಕಣ್ಣಿನಿಂದ ನೋಡುತ್ತಿರುವಾಗಲೇ, ವ್ಯವಸ್ಥೆಯ ಬಗೆಗೆ ಕಡೆಗಣ್ಣಿನ ನೋಟವನ್ನು ಬೀರಿ ಸಾಗುವ ಧೋರಣೆಯೊಂದು ಸವಿತಾರಲ್ಲಿ ಗಟ್ಟಿಯಾಗಿದೆ. ಈ ಧೋರಣೆಯು ಬದುಕಿನ ಬದಲಾವಣೆಯ ಸಹಜ ಗತಿಯೆಂಬಂತೆ ಇವರ ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತದೆಯೇ ಹೊರತು, ಉದ್ದೇಶಪೂರ್ವಕ ಸ್ತ್ರೀವಾದಿ ನಿಲುವುಗಳಿಂದ, ಕ್ರಾಂತಿಯ ಉದ್ಘೋಷಗಳಿಂದ ಹೊರಟ ಹಾಗೆ ಕಾಣಿಸುವುದಿಲ್ಲ.

ನಾನು ಆರಂಭದಲ್ಲಿ ಪ್ರಸ್ತಾಪಿಸಿದಂತೆ ಅಧ್ಯಯನದ ನೆಲೆಗಳ ಒಳ ಹೆಣಿಗೆಯೊಂದು ರೂಪುಗೊಳ್ಳಬೇಕಾಗಿರುವುದು ಎಂದರೆ, ಅವರ ಕಾವ್ಯದ ಸೋಲು-ಗೆಲುವುಗಳ ಜೊತೆ ಜೊತೆಗೇ ಈ ಪಲ್ಲಟದ ಅಂಶವೂ ಚರ್ಚೆಯಾಗಬೇಕಾಗಿರುವುದು, ಈ ಹೊತ್ತಿನ ಚಾರಿತ್ರಿಕ ಅಗತ್ಯ. ಈ ಮಾತುಗಳನ್ನು ಹೇಳುತ್ತಿರುವಾಗ 'ಸ್ತ್ರೀ ಲೋಕ'ದ ಮೂಲಕ ಸವಿತಾ ನಡೆಸಿದ ಭಿನ್ನ ಶೋಧನೆಯೂ ನನ್ನ ಗಮನದಲ್ಲಿದೆ. ಕಾವ್ಯದಲ್ಲಿ ಸಹಜ ಆತ್ಮವಿಶ್ವಾಸದಲ್ಲಿ ಎದುರಿನ ಸವಾಲುಗಳನ್ನು, ದೃಷ್ಟಿಯನ್ನು ಬೇರೆಯೆಡೆಗೆ ಹೊರಳಿಸುವುದರ ಮೂಲಕವೇ ದುರ್ಲಕ್ಷಿಸಿ ಮುನ್ನುಗ್ಗುವ ಸವಿತಾ, 'ಸ್ತ್ರೀ ಲೋಕ' ಕಾದಂಬರಿಯಲ್ಲಿ ಪ್ರಜ್ಞಾಪೂರ್ವಕವಾಗಿ, ಖಚಿತ ಉದ್ದೇಶಗಳಲ್ಲಿ ಅವುಗಳನ್ನು ಮುಖಾಮುಖಿಯಾಗಿಸುತ್ತಾರೆ. ಈ ಮುಖಾಮುಖಿಯಲ್ಲಿಯೂ ಅವರು ವ್ಯವಸ್ಥೆಯನ್ನು ಪ್ರಶ್ನಿಸುವ ವಿಧಾನವಾಗಲಿ, ಹೆಣ್ಣಿನ ಸ್ಥಿತಿಗತಿಗಳ ಬಗೆಗಿನ ಅವರ ನಿಲುವುಗಳಾಗಲೀ ಕುತೂಹಲಕರವೇ. ಹೆಣ್ಣಿನ ಪ್ರಜ್ಞೆಯಲ್ಲಿ ವ್ಯವಸ್ಥೆಯ ಸ್ಥಾಪಿತ ಮಾದರಿಗಳು ಶಾಶ್ವತ ಎನ್ನುವ ನಂಬಿಕೆಯನ್ನಷ್ಟೇ 'ಸ್ತ್ರೀ ಲೋಕ' ಪ್ರಶ್ನಿಸುತ್ತದೆ. ಆ ಸ್ಥಾಪಿತ ಮಾದರಿಗಳೊಳಗಿನ ಬಿರುಕುಗಳನ್ನು , ಪರ್ಯಾಯ ಮಾದರಿಗಳ ಹುಡುಕಾಟವನ್ನು, ಅಂತಿಮವಾಗಿ ಮತ್ತು ಬೇರೊಂದು ಕಡೆ ನಾನು ಈಗಾಗಲೇ ಚರ್ಚಿಸಿದಂತೆ, ಸ್ವಾಯತ್ತತೆಯ ಕಡೆಗಿನ ಪ್ರಯಾಣದ ಹೆಜ್ಜೆ ಗುರುತುಗಳನ್ನು ಈ ಕಾದಂಬರಿ ದಾಖಲಿಸುತ್ತದೆ. ಹೀಗಾಗಿ 'ಸ್ತ್ರೀ ಲೋಕ' ಕಾದಂಬರಿಯು ಮೇಲ್ನೋಟಕ್ಕೆ ಭಿನ್ನ ದಿಕ್ಕಿನ ಹುಡುಕಾಟವಾಗಿ ಕಂಡರೂ, ಆಳದಲ್ಲಿ ಆತ್ಮಗೌರವದ ಹುಡುಕಾಟವೇ ಆಗಿರುವುದರಿಂದ ಅವರ ಕಾವ್ಯದ ನಿಲುವುಗಳಿಗೆ ಪೂರಕವಾಗಿರುವಂತೆಯೇ ಕಾಣಿಸುತ್ತದೆ.

ಸವಿತಾ ಮೂಲತಃ ಲಯಗಳ ಹುಡುಕಾಟದ ಕವಿ. ಇದನ್ನು ಸಾಂಗತ್ಯದ ಹುಡುಕಾಟವೆಂದೂ ಕರೆಯಬಹುದು. ಈ ಲಯ, ಸಾಂಗತ್ಯವೆನ್ನುವುದು ಸಿದ್ಧ ಸ್ಥಿತಿಯಲ್ಲವಲ್ಲ. ಅದೊಂದು ಸಾಧಿಕೊಳ್ಳಬೇಕಾದ ಸಂದರ್ಭ ಮತ್ತು ಮನಃಸ್ಥಿತಿ. ಈ ತನಕ ಪ್ರಕಟವಾಗಿರುವ ಅವರ ನಾಲ್ಕೂ ಸಂಕಲನಗಳಲ್ಲಿ ಈ ಹುಡುಕಾಟವೆನ್ನುವುದು ಸ್ಥಾಯಿಯೆನ್ನುವಂತೆ ನಿರಂತರವಾಗಿ ನಡೆದಿದೆ. ಪ್ರಕೃತಿ-ಮನುಷ್ಯನ ನಡುವೆ ಸಾಧಿತವಾಗಬೇಕಾಗಿರುವ ಲಯ, ಸಂಬಂಧಗಳ ಜಿಕ್ಕಟ್ಟುಗಳ ನಡುವೆಯೇ ಕಟ್ಟಿಕೊಳ್ಳಬೇಕಾದ ಲಯ, ಬದುಕಿನ ಕನಸು-ವಾಸ್ತವಗಳ ನಡುವೆ ಕಟ್ಟಿಕೊಳ್ಳಬೇಕಾದ ಲಯ...... ಈ ಎಲ್ಲವುಗಳನ್ನೂ ಇವರ ಕಾವ್ಯ ಹುಡುಕುತ್ತಲೇ ಇದೆ.

ಹಾಗೆ ನೋಡಿದರೆ, ಸವಿತಾರ ಕಾವ್ಯದ ಶೈಲಿಯಲ್ಲಿಯೂ ಈ ಹೊಸ ಲಯದ ಹುಡುಕಾಟವಿದೆ. ಅಭಿವ್ಯಕ್ತಿಯ ನಾಟಕೀಯ ಮಾದರಿಗಿಂತ ಸಾವಧಾನದ, ಸಂಯಮದ, ಕೆಲವೊಮ್ಮೆ ಸ್ವಗತದ ಲಯದಲ್ಲಿಯೂ ಈ ಕವಿ ನಂಬಿಕೆಯಿದ್ದಂತೆ ತೋರುತ್ತದೆ. ಕರುಳು ಕತ್ತರಿಸುವ ಅನುಭವದ ಘಳಿಗೆಗಳನ್ನಾಗಲಿ, ಬದುಕನ್ನು ಅರಳಿಸುವ ರೋಮಾಂಚನದ ಘಳಿಗೆಗಳನ್ನಾಗಲೀ, ಸವಿತಾ ಹಿಡಿಯುವುದು ಸಾವಧಾನದ ಸಂವಿಧಾನದಲ್ಲಿಯೇ.

ಇವರ ಸಾವಧಾನದ ಶೈಲಿಗೆ ಚಲನಶೀಲತೆಯನ್ನೂ, ವೈವಿಧ್ಯತೆಯ ಸೊಗಸನ್ನೂ ತಂದುಕೊಟ್ಟಿರುವ ಎರಡು ಮುಖ್ಯ ಪ್ರತಿಮೆಗಳೆಂದರೆ, ಚಂದ್ರ ಮತ್ತು ಬಣ್ಣ. ಚಂದ್ರನ ಬಗೆಗಂತೂ ಸವಿತಾ obsessed ಎನಿಸುವಷ್ಟು ಮೋಹಿತರು. 'ಚಂದ್ರನನ್ನು ಕರೆಯಿರಿ ಭೂಮಿಗೆ' ಕವನ ಒಂದು ರೀತಿಯಲ್ಲಿ ಅವರ manifesto ಎಂದರೂ ನಡೆಯುತ್ತದೆ:

ಕರೆಯಿರಿ ಚಂದ್ರನನ್ನು ಭೂಮಿಗೆ
ನಾನು ನಾನಿರುವಂತೆಯೇ
ನೋಡುವೆ ಒಂದು ಘಳಿಗೆ

ಚಂದ್ರ ಭೂಮಿಗೆ ಬರಬೇಕೆನ್ನುವ ಅವಾಸ್ತವ ಹಂಬಲವಿಲ್ಲದ, ಅದು ಸಾಧ್ಯವೆಂದು ಒಂದು ಘಳಿಗೆಯಾದರೂ ನಂಬದ ಮನಃಸ್ಥಿತಿ, ಈ ಕವಿಯ ಮಟ್ಟಿಗೆ ಬರಡು, ಘೋರ. ಚಂದ್ರನೂ ಸೇರಿದಂತೆ ಬೆಟ್ಟ, ಗುಡ್ಡ, ಹೊಳೆ, ಆಕಾಶ, ನಕ್ಷತ್ರ ಯಾವುದೂ ಸವಿತಾ ಮಟ್ಟಿಗೆ ಕೇವಲ ಸೌಂದರ್ಯದ ಪ್ರತಿಮೆಗಳಲ್ಲ, ಕವಿ ಸಮಯವೂ ಅಲ್ಲ. ಅವು ಸಜೀವ ಪಾತ್ರಗಳೇ ಆಗಿವೆ. ಈ ಪಾತ್ರಗಳೊಂದಿಗೆ ಆಕೆಗೆ ಸ್ನೇಹವಿದೆ, ಜಗಳವಿದೆ, ಅವುಗಳೊಂದಿಗೆ ಜೀವರ ಸಂಬಂಧವನ್ನು ಕಟ್ಟಿಕೊಳ್ಳಬೇಕೆನ್ನುವ ಆಸೆಯೂ ಇದೆ:

ಮಾತಾಡಿಸಬೇಕು
ಹೊರಳುತ್ತಿರುವ ಭೂಮಿಯನ್ನು
ಉರುಳುತ್ತಿರುವ ಸಾಗರವನ್ನು
ಮಾತನಾಡಿಸಬೇಕು
ದೇವರೇ.... ಇವರದ್ದು ಯಾವ ಭಾಷೆ ?
ಎಂದಾದರೂ ಕೈಗೂಡುವುದೇ ಆಶೆ ?

'ಹೂವು' ಪದ್ಯದ ಈ ಮಾತುಗಳನ್ನು ನೋಡಿ-

ಏ ಹೂವೆ
ನಿನ್ನ ಭಾಷೆ ನನಗೆ ಅರ್ಥವಾಗುವುದು
ನನ್ನ ಆಶೆ ನಿನ್ನಂತೆ ಆಗುವುದು.

ಪ್ರಕೃತಿಯ ಮೂಲ ಪ್ರತಿಮೆಗಳನ್ನೆಲ್ಲ ತಮ್ಮ ಮನೋಭೂಮಿಕೆಯ, ಸಂವೇದನೆಯ ಅಭಿನ್ನ ಭಾಗವಾಗಿಸಿಕೊಳ್ಳುವುದರ ಮೂಲಕ ಮನುಷ್ಯ-ಪ್ರಕೃತಿ ನಡುವೆ ಲಯವನ್ನು ನಿರ್ಮಿಸಿಕೊಳ್ಳುವುದು ಮಾತ್ರವಲ್ಲ, ಇದರಿಂದ ವಿಸ್ತಾರವಾಗಬಹುದಾದ ಬದುಕಿನ ಕ್ಯಾನ್‌ವಾಸ್ ಬಗೆಗೂ ಕವಿಗೂ ಆಸಕ್ತಿಯಿದೆ. ಆದ್ದರಿಂದಲೇ ಪ್ರಕೃತಿ ಮತ್ತು ಮನುಷ್ಯನ ನಡುವೆ ಅದ್ವೈತ ಸಾಧಿಸುವ ಹಂಬಲದ ಅನೇಕ ಕವನಗಳಿವೆ. ಬುದ್ಧ ಮತ್ತು ಹೂವು ಕವನದಲ್ಲಿ ಅವರು ಹೇಳುತ್ತಾರೆ-

ಪೂರ್ವಜನ್ಮದ ಸ್ಮರಣೆ
ಅವನು ಹೂವಾಗಿದ್ದ.

ಬುದ್ಧನು ಪ್ರೀತಿ, ಕರುಣೆ ಮುಂತಾದ ಎಲ್ಲ ಅಪರೂಪದ ಮಾನವೀಯ ಗುಣಗಳ ಸಾಕಾರ ರೂಪವಾಗಿದ್ದು ಅವನು ಹಿಂದಿನ ಜನ್ಮದಲ್ಲಿ ಹೂವಾಗಿದ್ದರಿಂದ ಎನ್ನುವ ದೃಷ್ಟಿಕೋನದಲ್ಲಿ ಇದು ಸ್ಪಷ್ಟವಾಗಿದೆ.

೩

ಈ ಭಾಗದಲ್ಲಿ ಸವಿತಾ ಅವರ ಕಾವ್ಯವನ್ನು ಮೂಲವಾಗಿಟ್ಟುಕೊಂಡು ಲೇಖಕಿಯರನ್ನು ಚರ್ಚಿಸುವ ಹೊತ್ತಿನಲ್ಲಿ ಕನ್ನಡ ವಿಮರ್ಶೆಯು ಎದುರಿಸುವ ಕೆಲವು ಸಮಸ್ಯೆಗಳನ್ನು ಸ್ಥೂಲವಾಗಿ ವಿವರಿಸಿಕೊಳ್ಳುವ ಪ್ರಯತ್ನ ಮಾಡುತ್ತೇನೆ. ಆರಂಭದಲ್ಲಿಯೇ

ಒಂದು ಮಾತನ್ನು ಸ್ಪಷ್ಟಪಡಿಸಬೇಕು. ಕನ್ನಡದ ಯಾವ ವಿಮರ್ಶಕರೂ ಸ್ತ್ರೀವಾದದ ಬಗ್ಗೆಯಾಗಲಿ, ಲೇಖಕಿಯರ ಬಗ್ಗೆಯಾಗಲಿ ಪೂರ್ವಗ್ರಹ ಪೀಡಿತರಲ್ಲ. ಆದರೂ ಅವರು ತಲುಪುವ ತೀರ್ಮಾನಗಳು ಅನೇಕ ಬಾರಿ ಸ್ತ್ರೀವಾದಿ ಚಿಂತಕಿಯರು ತಲುಪುವ ತೀರ್ಮಾನಗಳಿಗಿಂತ ಭಿನ್ನವಾಗಿರುತ್ತದೆ. ಈ ಭಿನ್ನತೆ ಮತ್ತು ತೊಡಕುಗಳನ್ನು ಬಿಡಿಸಿಕೊಳ್ಳುವ ಉದ್ದೇಶದಿಂದ ಈ ಪ್ರಯತ್ನದಲ್ಲಿ ನನಗೆ ಆಸಕ್ತಿಯಿದೆ.

ಸವಿತಾರ ನಾಲ್ಕು ಸಂಕಲನಗಳ ಒಟ್ಟು ಓದಿನಿಂದ ವಾತ್ಸಲ್ಯ, ಅಂತಃಕರಣ ಮತ್ತು ತಾಯ್ತನಗಳೇ ಅವರ ಕಾವ್ಯದ ಮೂಲ ನೆಲೆಗಳೆಂದೂ, ವ್ಯವಸ್ಥೆಯನ್ನು ಈ ಮೌಲ್ಯಗಳ ಮೂಲಕವೇ ಸವಿತಾ ಮುಖಾಮುಖಿಯಾಗುತ್ತಾರೆಂದೂ ಅರ್ಥೈಸಲು ಸಾಧ್ಯ. ಈ ಗುಣದ ಕಾರಣಕ್ಕಾಗಿಯೇ ಘೋಷಿತ ಸ್ತ್ರೀವಾದಿಗಳ ಬರವಣಿಗೆಗಿಂತ ಇವರ ಬರವಣಿಗೆ ಭಿನ್ನವಾಗುತ್ತದೆ ಎನ್ನುವುದೂ ನಿಜವೇ. ಆದರೆ ಕೊನೆಗೂ ಈ ಮೌಲ್ಯಗಳು, ಗುಣವಿಶೇಷಣಗಳು ಮತ್ತೆ ಹೆಣ್ಣನ್ನು ವ್ಯವಸ್ಥೆಯ ಅಪೇಕ್ಷಿತ ಚೌಕಟ್ಟಿಗೇ ತಳ್ಳಿಬಿಡುತ್ತವೆಯಾದ್ದರಿಂದ, ಅಂತಿಮವಾಗಿ ಏನನ್ನು ಸಾಧಿಸಿದಂತಾಯಿತು ಎನ್ನುವ ಪ್ರಶ್ನೆ ಇಲ್ಲಿ ಎದುರಾಗುತ್ತದೆ. ಸಮಸ್ಯೆ ಶುರುವಾಗುವುದೇ ಇಲ್ಲಿಂದ. ಸಾಂಸ್ಕೃತಿಕ ಸ್ತ್ರೀವಾದ ಮತ್ತು ಲೇಖಕಿಯರ ಬರವಣಿಗೆ ಎರಡನ್ನೂ ಗ್ರಹಿಸುವ ಮತ್ತು ಅರ್ಥೈಸುವ ಕ್ರಮದಲ್ಲಿರುವ ಸಮಸ್ಯೆ ಇದು. ಕೆಲವು ಕವನಗಳ ಮೂಲಕವೇ ಆದನ್ನು ನೋಡಬಹುದು 'ಕೊಂಡ ಹಾಯುವಳು' ಸವಿತಾರ ಅತ್ಯುತ್ತಮ ಕವನಗಳಲ್ಲೊಂದು-

ಒಮ್ಮೆ ಮತ್ತೊಮ್ಮೆ
ಮಗದೊಮ್ಮೆ
ಹಾಯುವಳು ಕೊಂಡ
ನೋಡುವನವಳ ಗಂಡ
ದೂರದಿಂದಲೇ ಮಂಕಾಗಿ

ಇಲ್ಲಿ ಕೊಂಡ ಹಾಯುವುದು ಹೆಣ್ಣಿನ ಬದುಕನ್ನು ಕುರಿತ ಪ್ರತಿಮೆಯಂತೆಯೇ ಅವಳ ಶಕ್ತಿ ಕೇಂದ್ರದ ರೂಪಕವೂ ಹೌದು. ಬದುಕಿನ ಕೊನೆಯಿಲ್ಲದ ಬಿಕ್ಕಟ್ಟುಗಳನ್ನು ಈಕೆ ನಿರಂತರವಾಗಿ ಹಾಯುತ್ತಲೇ ಇದ್ದಾಳೆ. ಕೊಂಡ ಹಾಯುವುದು ಅವಳಿಗೆ ಅನಿವಾರ್ಯ ಕರ್ಮ ಎನ್ನುವುದು ಎಷ್ಟು ನಿಜವೋ, ಅದು ಅವಳ ಬದುಕಿನ ಬದ್ಧತೆ ಎನ್ನುವುದೂ ಅಷ್ಟೇ ನಿಜ. ಬದುಕಿನ ಹೋರಾಟದಲ್ಲಿ ಸೋತ ಅಥವಾ ಲಕುಮಿಯ ಬದುಕಿನ ಮೂಲ ಸಮಸ್ಯೆಯೇ ಆಗಿರುವ ಗಂಡ ಮಂಕಾಗಿದ್ದಾನೆ. ಆದರೆ ಲಕುಮಿ ಮಾತ್ರ

ನಿಗಿ ನಿಗಿ ಹೊಳೆಯುವ ಕೆಂಡದಂತಹ ಬದುಕಿನ ಕೊಂಡವನ್ನು ಹಾಯುವುದರಲ್ಲಿನ ತನ್ನ ಶ್ರದ್ಧೆಯನ್ನು ಕಳೆದುಕೊಂಡಿಲ್ಲ. ಈ ಇಡೀ ಸನ್ನಿವೇಶವನ್ನು 'ಸಹನಶೀಲತೆ' ಎಂದು, ಈ ಸಹನಶೀಲತೆಯೇ ಮೂಲವಾಗಿ ಬದುಕಿನ ಕಷ್ಟ, ಪರಂಪರೆಗಳಿಗೆ ಒಳಗಾಗುವ ಅಸಹಾಯಕತೆಯಾಗಿ ಕಾಣುವ ದೃಷ್ಟಿಯೊಂದು. ಇನ್ನೊಂದು: ಗಂಡು ಸೋತಾಗಲೂ, ಅಸಹಾಯಕನಾದಾಗಲೂ ಬದುಕಿಗೆ ಬೆನ್ನು ತೋರಿಸದ ಚಿತ್ತಸ್ಥೈರ್ಯದ ಹೆಣ್ಣಿನ ದೃಷ್ಟಿ. ವಿಪರ್ಯಾಸವೆಂದರೆ, ಈ ಎರಡೂ ದೃಷ್ಟಿಕೋನಗಳನ್ನೂ ಸಾಂಸ್ಕೃತಿಕ ಸ್ತ್ರೀವಾದದ ಮೂಲದಿಂದಲೇ ಪಡೆಯಲಾಗುತ್ತದೆ ಎನ್ನುವುದು. 'ತಂಗಿ ಹುಟ್ಟಿದಳು' ಕವನ ನೋಡಿ-

ಹಿಡಿಯಷ್ಟಿರುವ ತಂಗಿಯನು
ಮುಡಿಯಷ್ಟಿರುವ ಅಕ್ಕ
ಅಕ್ಕರೆಯಿಂದ ಅಪ್ಪುವಳು
ಅಭಯ ನೀಡುವಳು

ಬೇಡದ ಕೂಸನ್ನು, ಹಡೆದವ್ವನಿಗೂ ಸಾಕಾದ ತಂಗಿಯನ್ನು ಇಲ್ಲಿನ ಅಕ್ಕ, ಕೇವಲ ಅಕ್ಕರೆಯಿಂದ ಅಪ್ಪುವುದು ಮಾತ್ರವಲ್ಲ, 'ಅಭಯ'ವನ್ನೂ ನೀಡುತ್ತಾಳೆ. ಈ ಕವನವನ್ನು ಅಕ್ಕರೆಯ, ವಾತ್ಸಲ್ಯದ ನೆಲೆಯಲ್ಲಿ ವ್ಯವಸ್ಥೆಯೊಂದಿಗಿನ ಮುಖಾಮುಖಿ ಎಂದು ಮಾತ್ರ ಗುರುತಿಸಿಬಿಟ್ಟರೆ, ಹೆಣ್ಣಿನ ಬದುಕಿನ ಬದಲಾವಣೆಯ ಪ್ರಕ್ರಿಯೆಯ ಒಂದು ಭಾಗವನ್ನು ಮಾತ್ರ ಗುರುತಿಸಿದಂತಾಗುತ್ತದೆ. 'ಅಕ್ಕರೆ'ಯ (ಸಾಂಪ್ರದಾಯಿಕ ಮಾತ್ರವಲ್ಲ) ಸ್ತ್ರೀ ವಿಶಿಷ್ಟ, ಸಾರ್ವಕಾಲಿಕ ಮೌಲ್ಯದ ಜೊತೆಯಲ್ಲಿಯೇ, 'ಅಭಯ'ದ ಹೊಸ ಮೌಲ್ಯವನ್ನು ನಾವು ಅವಶ್ಯವಾಗಿ ಗುರುತಿಸಬೇಕು.

'ಕಿಟಕಿಯಲ್ಲಿ ಚಂದಿರ' ಇನ್ನೊಂದು ಮುಖ್ಯ ಕವನ. ನಾಯಕಿಯ ಎದುರಿಗೆ ಆಯ್ಕೆಯ ಸಮಸ್ಯೆಯಿದೆ, ಗೊಂದಲವಿದೆ-

ಪಕ್ಕದಲ್ಲಿ ಗಂಡನಿರುವ
ತೊಟ್ಟಿಲಲ್ಲಿ ಕಂದನಿರುವ
.. .. .. .. .. .. .. .. .
ಹೋಗಿ ಬಿಡು ಚಂದಿರ

ಇಲ್ಲಿ ಸಂಕೀರ್ಣ ಮನಃಸ್ಥಿತಿಯೊಂದರ ಚಿತ್ರಣವಿದೆ. ಇದನ್ನು

ವ್ಯವಸ್ಥೆಯೊಂದಿಗಿನ ರಾಜಿ ಎಂದೂ, ಸ್ಥಾಪಿತ ಮೌಲ್ಯಗಳ ಮುಂದುವರಿಕೆಯೆಂದು ಮಾತ್ರ ವಿವರಿಸಿಕೊಂಡು ಬಿಟ್ಟರೆ, ಸಂಕೀರ್ಣ ಮನಃಸ್ಸಿಯನ್ನು ಸರಳೀಕೃತಗೊಳಿಸಿದಂತಾಗುತ್ತದೆ. ಈ ಬಗೆಯ ಸಂಕೀರ್ಣ ಮನಃಸ್ಥಿತಿಯನ್ನು ಚಂದಿರನೇ ರೂಪಕವಾಗಿರುವ ಇತರ ಕವನಗಳಲ್ಲಿಯೂ ಸವಿತಾ ಚಿತ್ರಸುತ್ತಾರೆ:

ಆ ಚಂದಿರ ನಿನಗೆ ಜೊತೆಯಾದರೂ
ಆಗಬಹುದು ಎಂದು
ಇವಳಿಗೆ ಹೇಳಬೇಕು
ಹೇಗೆ ಹೇಳುವುದು?

ಅಥವಾ 'ಹೇಗೆ ಪ್ರೀತಿಸವೆ ಇರಲಿ ಚಂದ್ರನನ್ನು' ಕವನದ ಈ ಸಾಲುಗಳನ್ನು ನೋಡಿ,

ಸಿದ್ಧಾರ್ಥನ ಪ್ರಿಯ ಮಿತ್ರ, ಮೈತ್ರಿಯೇ ಮಹಾಸೂತ್ರ
ಪ್ರೀತಿಸದೇ ಇರಲಾರೆ ಚಂದ್ರನನ್ನು

ಸಂಬಂಧಗಳ ನಡುವಿನ ಆಯ್ಕೆಯ ಮತ್ತು ಆದ್ಯತೆಯ ಪ್ರಶ್ನೆಯಾಗಿಯೇ ಇದನ್ನು ವಿವರಿಸಿಕೊಳ್ಳಬೇಕು. ಈ ಕವನಗಳು ರಚನೆಯಲ್ಲಿ ಸರಳವಾಗಿದ್ದೂ, ಸರಳ ತೀರ್ಮಾನಗಳಾಚೆಗಿನ ಆಯಾಮಗಳನ್ನು ಸೂಚಿಸುತ್ತವೆ.

ನಿಜ, ಮೂಲತಃ ಸವಿತಾ ಅದಮ್ಯ ಆಶಾವಾದಿ. 'ಮೊಟ್ಟೆ,' 'ಮಹಮ್ಮದನ ಪ್ರೇಮ ಪತ್ರ', 'ಸಮಯವಿದೆಯೆ ಪಪ್ಪಾ', 'ರಾಮು-ರಹೀಮು' ಮುಂತಾದ ಅನೇಕ ಉದಾಹರಣೆಗಳನ್ನು ಕೊಡಬಹುದು. ಈ ಕವನಗಳು ಮುಗ್ಧ ಆಶಾವಾದದಂತೆಯೇ ಕಾಣಿಸುತ್ತವೆ. ಮನುಷ್ಯನ ಇಚ್ಛಾಶಕ್ತಿಯ ಬಗೆಗೆ, ನ್ಯಾಯ ಮತ್ತು ಒಳಿತಿನ ಗೆಲುವನ್ನು ಕುರಿತೂ ಸವಿತಾಗೆ ಅಪಾರ ನಂಬಿಕೆ. ಚರಿತ್ರೆಯ ಎಲ್ಲ ವಿದ್ರೋಹಗಳ, ಧರ್ಮಗಳ ನಡುವಿನ ನಿರಂತರ ಘರ್ಷಣೆಯಾಚೆಗೂ ಇವರಿಗೆ ಸಾಧ್ಯವಾಗಿರುವ ಆಶಾವಾದಿತನ ಸದ್ಯದ ಸನ್ನಿವೇಶದಲ್ಲಂತೂ ವಿಲಕ್ಷಣವಾಗಿಯೂ ಕಾಣಿಸುತ್ತದೆ. ಹಾಗೆಯೇ 'ಮೊಟ್ಟೆ' ಕವನದಲ್ಲಿ ಮನುಷ್ಯ ತನ್ನೆಲ್ಲ ವಿಕಾರಗಳನ್ನು ಗೆದ್ದು ಬಿಡಬಹುದಾದ ಸಾಧ್ಯತೆಯೂ.

ಒಟ್ಟಂದದಲ್ಲಿ ಸವಿತಾ ಅಪ್ಪಟ ಮಾನವೀಯ ನೆಲೆಯನ್ನು ನಂಬಿದವರು, ಬಯಸುವವರು. ವಾತ್ಸಲ್ಯ, ಅಂತಃಕರಣ, ತಾಯ್ತನ-ಈ ಎಲ್ಲ ಸ್ತ್ರೀ ವಿಶಿಷ್ಟ ಅನುಭವಗಳ

ವಲಯವನ್ನು ಆಧರಿಸಿಯೇ, ಪ್ರಕೃತಿಯನ್ನು ಒಳಗೊಂಡು ಇನ್ನೂ ಹೆಚ್ಚು ಶಕ್ತವಾದ, ಶ್ರೀಮಂತವಾದ, ಬದುಕಲು ಸಹನೀಯವಾದ, ಪ್ರೀತಿಸಲು ಸಾಧ್ಯವಾಗಬಹುದಾದ ಬದುಕನ್ನು ಕಟ್ಟುವುದರಲ್ಲಿ ನಿರತರಾದ ಕವಿ ಇವರು.

ದೇವನೂರು ಮಹಾದೇವ, ಸವಿತಾ ಕಾವ್ಯ ತಂಗಾಳಿಯಂತೆ ಎಂದು ಹೇಳುತ್ತಾರೆ. ತಂಗಾಳಿ ಯಾವಾಗಲೂ ಬೀಸುವುದಿಲ್ಲ ಎನ್ನುವುದೇ ತಂಗಾಳಿಯನ್ನು ಕುರಿತ ಮನುಷ್ಯನ ಹಂಬಲವನ್ನು, ನಿರೀಕ್ಷೆಯನ್ನು ಹೆಚ್ಚಿಸುತ್ತದೆ ಮಾತ್ರವಲ್ಲ, ತಂಗಾಳಿಯ ಮಹತ್ವವನ್ನು ಹೇಳುತ್ತದೆ. ಸವಿತಾ ಕಾವ್ಯವನ್ನು ಕುರಿತಂತೆ ಎಲ್ಲರಿಗಿರುವ ಪ್ರೀತಿಯನ್ನು, ಭರವಸೆಯನ್ನು, ಅವರ ಕಾವ್ಯದ ಮಹತ್ವವನ್ನು ಇದಕ್ಕಿಂತ ಸಂಕ್ಷಿಪ್ತವಾಗಿ, ಇದಕ್ಕಿಂತ ಒಳ್ಳೆಯ ರೂಪಕದಲ್ಲಿ ಹೇಳಲು ಸಾಧ್ಯವಿಲ್ಲವೇನೋ. ಎಲ್ಲ ಬಗೆಯ ಮಾಲಿನ್ಯಗಳ ಈ ಕಾಲದಲ್ಲಿ ಸವಿತಾರ ಬದುಕಿನ ಪ್ರೀತಿಯ, ಶುದ್ಧ ಕಾವ್ಯದ ತಂಗಾಳಿ ಹೆಚ್ಚು ಬೀಸಲಿ.

ತಮ್ಮ ಕಾವ್ಯದ ಮೂಲಕ ಸವಿತಾ ಹೆಣ್ಣಿನ ವಿಸ್ತಾರವಾಗುತ್ತಿರುವ ಪ್ರಜ್ಞೆಯ, ಸಂವೇದನೆಯ ಜಗತ್ತನ್ನು ಮಾತ್ರ ಪ್ರತಿನಿಧಿಸುತ್ತಿಲ್ಲ, ಕಾವ್ಯ ವಲಯವನ್ನು ವಿಸ್ತರಿಸುತ್ತಿದ್ದಾರೆ. ಅವರ ಕಾವ್ಯಕ್ಕೆ ಇನ್ನೂ ಹೆಚ್ಚಿನ ವಿಸ್ತಾರ, ವೈವಿಧ್ಯ ಸಾಧ್ಯವಾಗಲಿ.

**-ಡಾ|| ಎಂ. ಎಸ್. ಆಶಾದೇವಿ**

ಶಿವಮೊಗ್ಗ

**ಗುರು ಸಮಾನರಾದ**

ಜಿ. ಎಸ್. ಶಿವರುದ್ರಪ್ಪ

ಕೆ. ಎಂ. ಶಂಕರಪ್ಪ

ದೇವನೂರ ಮಹಾದೇವ

ಅವರಿಗೆ

**ಈ ಕೃತಿ ಅರ್ಪಿತ**

## ಪರಿವಿಡಿ:

**ಹೂ ಪದ್ಯಗಳು**

# ನಾನು ಬರುತ್ತೇನೆ ಕೇಳು (೧೯೮೭)

-ನಾಗಭೂಷಣನಿಗೆ
ಪ್ರೀತಿಯಿಂದ

# ಕೊಡು ನಿನ್ನ ದುಃಖ

ನನ್ನ ಸೌಂದರ್ಯವನ್ನು
ಮೆಚ್ಚಿಕೊಂಡ ಜನ
ನನ್ನ ಸರಳತೆಯನ್ನು
ಮೆಚ್ಚಿಕೊಂಡ ಜನ
ನನ್ನ ದುಃಖ ಎಷ್ಟೆಂದು ಕೇಳಲಿಲ್ಲ.

ನನ್ನನ್ನು ಪ್ರೀತಿಸಿದ ತಂದೆ
ನನ್ನನ್ನು ಸಲಹಿದ ತಾಯಿ
ನನ್ನ ಆಸೆಗಳೇನು
ಎಂದು ಕೇಳಲಿಲ್ಲ.

ನಾನು ನೀಲಿ ನಕಾಶೆಯೊಳಗೆ
ಹೊಳೆಯುವ ಕನಸುಗಳನ್ನು
ಗುರುತಿಸುತ್ತಿರುವಾಗ
ನನ್ನ ಜೀವದ ಹುಡುಗ
'ನೀನೆಷ್ಟು ಮುಗುದೆ '
ಎಂದು ವಿಷಾದದಿಂದ ನಕ್ಕ.

ಆವತ್ತೆ ನನಗೆ ಗೊತ್ತಾಯಿತು,
ಈ ಜಗತ್ತಿನಲ್ಲಿರುವುದು
ಕೊಳೆತ ಹೃದಯಗಳು ಮಾತ್ರ.
ಈ ಜಗತ್ತಿನಲ್ಲಿರುವುದು ಹುಳಿತ ಕಣ್ಣುಗಳು ಮಾತ್ರ.

ಅಂದಿನಿಂದಲೆ ನಾನು
ಎಲ್ಲರ ಬಳಿ ಕಣ್ಣೀರು
ಬೇಡಲು ಶುರುಮಾಡಿದೆ.
ಎಲ್ಲರ ಕನಸುಗಳನ್ನು
ಕುತೂಹಲಿಯಾಗಿ ನೋಡಿದೆ.

ನನ್ನೆದೆಯೊಳಗೆ
ಹರಳುಗಟ್ಟುತ್ತಿತ್ತು ದುಃಖ
ಬೆಟ್ಟವಾಗುತ್ತಿತ್ತು ದುಃಖ
ನಾನು ಎಲ್ಲರಿಗೂ ಕೂಗಿ ಹೇಳುತ್ತಿದ್ದೆ
ನೋಡಿ -
ಈ ಬೆಟ್ಟ ಕಣ್ಣೀರಿನದು
ನನ್ನದು ಹಾಗೂ ನಿಮ್ಮದು.

ಬೆಟ್ಟ ಕರಗಿ ಪ್ರವಾಹವಾಗಿ
ಹರಿಯುತ್ತಿತ್ತು ದುಃಖ.
ನಾನು ಎಲ್ಲರಿಗೂ ಕೂಗಿ ಹೇಳುತ್ತಿದ್ದೆ
ನೋಡಿ-
ಈ ಪ್ರವಾಹ ಕಣ್ಣೀರಿನದು, ನನ್ನದು ಹಾಗೂ ನಿಮ್ಮದು.

ಎಲ್ಲ ನಕ್ಕರು, ಹೊರಟೇ ಹೋದರು.
ನಾನೊಬ್ಬಳೆ ಆಗಿದ್ದೆ
ಜೊತೆಗೆ ಬೆಟ್ಟ-ಪ್ರವಾಹ.

ಕೊನೆಗೂ ನೆನಪಾಯಿತು
ಹೌದು
ಅದು ಅವನದೆ ಮುಖ.
ಅದು ಕೇಳುತ್ತಿತ್ತು
ಕೊಡು ನಿನ್ನ ದುಃಖ
ಕೊಡು ನಿನ್ನ ದುಃಖ.

# ನೀವೇಕೆ ಬೇಕು ?

ತಾರೆಯರೇ ಮಿಣುಮಿಣುಕಿ
ಅಣಕಿಸಿದ್ದು ಸಾಕು.
ಚಂದ್ರಮನೇ, ನಿನ್ನ ನಗುವಿಗೆ
ಮೂರು ಕಾಸು.
ಕೋಲ್ಮಿಂಚುಗಳೇ
ಎಷ್ಟು ಬಗೆಯ ಚಿತ್ತಾರ ಬರೆಯುತ್ತೀರಿ ನೀವು?
ಚಣಕೊಮ್ಮೆ ವೇಷ
ಬದಲಾಯಿಸಲೇಬೇಕೆ, ಮೋಡಗಳೇ?
ಕಲಕಲಿಸದಿದ್ದರೆ ನಿದ್ದೆ ಬರುವುದಿಲ್ಲವೆ, ಜಲವೆ?
ಕುಹೂ -ಕುಹೂ ಎಂದು ಕಿರುಲಬೇಡ, ಕೋಗಿಲೆಯೇ...
ಖುಷಿಯಿಂದ ಕೂಗುತ್ತೇನೆ ಕಿವಿಗೊಟ್ಟು ಕೇಳಿ-
'ಕವನ ಹೊಸೆಯಲಿಕ್ಕೆ ಬೇಡ... ನೀವಿನ್ನು'

೨
ಇಲ್ಲಿ............
ನನ್ನ ನೆಲೆಯಲ್ಲಿ, ಕೆಂಪೆಲೆಗಳ ನಡುವೆ
ಅರಳುತ್ತವೆ ಹಸಿರು ಹೂಗಳು.
ಹೆಪ್ಪುಗಟ್ಟಿದ ಮೌನದಲ್ಲಿ
ಗುಣುಗುಣುಸಿ ಹಾಡುತ್ತವೆ ಗೂಬೆಗಳು.
ಹೆಜ್ಜೆ ಹಾದಿಯ ತುಂಬ
ಕುಲುಕುಲು ನಗುತ್ತದೆ ಇರುಳು.
ಇಲ್ಲಿ......ಕನಸುಗಳು ಕಾಡುವುದಿಲ್ಲ.
ನೆನಪುಗಳು ಮರುಕಳಿಸುವುದಿಲ್ಲ.
ಕಲ್ಪನೆಗೂ ಮೀರಿದ ಬದುಕು,
ಕವನಿಸಲಿಕ್ಕೆ ಕೈ ತುಂಬ ಸರಕು.
ಹೀಗಿರುವಾಗ ನೀವೇಕೆ ಬೇಕು ಹೇಳಿ?

# ಬಿಡಿ ನನ್ನ ಪಾಡಿಗೆ ನನ್ನನ್ನು

೧

ನೀವು ಕೇಳಿದ್ದು ಒಳ್ಳೆಯದೆ ಆಯಿತು.
ನನಗೀಗ ಎಲ್ಲವೂ ಅರ್ಥವಾಯಿತು.
ನೋಡಿ -

ಹಿಂಡುಹಿಂಡಾಗಿ ಅಲೆಯುವ
ಮೋಡಗಳಲ್ಲೊಂದು ತುಣುಕೆಂದೊ...

ಆಕಾಶದ ಕ್ಯಾನ್‌ವಾಸಿನಲ್ಲಿ
ಬಳಿದ ಬಣ್ಣಗಳಲ್ಲೊಂದು ಎಳೆಯೆಂದೊ...

ಕಣ್ಣಾಮುಚ್ಚಾಲೆಯಾಡುವ
ಮಿಂಚಿನೊಳಗೊಂದು ಕಿಡಿಯೆಂದೊ...

ಒರಟಾಗಿ ಬೀಸುವ
ಗಾಳಿಯಲ್ಲೊಂದು ಗೆರೆಯೆಂದೊ...
ಈಗವನನ್ನು ವರ್ಣಿಸುವುದಿಲ್ಲ.

೨

ರಕ್ತ-ಮಾಂಸ-ಮೂಳೆ ವಿರಚಿತ
ನನ್ನೆದೆಯ ಮೇಲೆ ಮಲಗಿದ್ದ.
ಯಾರು ಕರೆದರೊ ಗೊತ್ತಿಲ್ಲ.
ಯಾಕೆ ಕರೆದರೊ ಗೊತ್ತಿಲ್ಲ.
ಯಾವಾಗ ಕರೆದರೊ ಗೊತ್ತಿಲ್ಲ.
ಪ್ರೀತಿಯನ್ನು ಒದ್ದು ಹೊರಟು ಹೋದ.

ನನಗನಿಸುತ್ತದೆ
ಮಣ್ಣಿನೊಳಗೆ ಹಿಡಿಯಾಗಿ ಮಲಗಿದ್ದಾನೆ,

ನಾನವನ ಮುಟ್ಟಲಾರೆ.
ಮಣ್ಣಿನೊಳಗೆ ಮೈ ಮರೆತು ಮಲಗಿದ್ದಾನೆ,
ನಾನವನ ಎಬ್ಬಿಸಲಾರೆ.

೨

ನಿಮ್ಮದು ಪ್ರೀತಿಯಾದರೂ ಸರಿಯೆ
ನಿಮ್ಮದು ಕರುಣೆಯಾದರೂ ಸರಿಯೆ
ಬದಲಾಯಿಸಲಾರವು ನನ್ನನ್ನು.
ನಿಮ್ಮದು ಮಾಟವಾದರೂ ಸರಿಯೆ
ನಿಮ್ಮದು ಮಾಯೆಯಾದರೂ ಸರಿಯೆ
ಒಳಗಾಗಲಾರೆ ನಾನು.

ನಾನೀಗ ಕವಯತ್ರಿ ಅಲ್ಲ
ನನ್ನಲ್ಲಿ ಕಲ್ಪನೆಗಳಿಲ್ಲ
ನನ್ನಲ್ಲಿ ಕನಸುಗಳಿಲ್ಲ
ನನ್ನಲ್ಲಿ ಕವಿತೆಗಳಿಲ್ಲ.

ಈ ಬಣ್ಣ-ಬೆಡಗು ಯಾವುದೂ
ಬದುಕ ಬೆಳಗಿಸುವುದಿಲ್ಲ.

ಅವನ ನೆನಪನ್ನು ಉಸಿರಾಡುತ್ತೇನೆ,
ಬಿಡಿ ನನ್ನ ಪಾಡಿಗೆ ನನ್ನನ್ನು.

## ಪ್ರತೀಕ್ಷೆ

ಅವೊತ್ತು ಆಗಸದ ತುಂಬ
ಮೋಡಗಳು ನೇತಾಡುತ್ತಿದ್ದವು.
ಕಪ್ಪು ಹೊದ್ದು ಮಲಗಿದ್ದ ರಸ್ತೆಗಳಷ್ಟೇ
ಕೈ ಬೀಸುತ್ತಿದ್ದವು.
ನಿನ್ನ ಹೆಜ್ಜೆ ಹಾರಿಸಿದ ಧೂಳೊಂದಿಗೆ
ಮಸುಕಾಗಿ ಮರೆಯಾದ ಬೆನ್ನ
ಕಣ್ತುಂಬಿಕೊಂಡು ನಿಂತಿದ್ದೆ,
ಮಾತು ಮರೆತವಳಂತೆ.

ಇವೊತ್ತು ಮೈ ತುಂಬ ಕಣ್ಣುಕಿವಿ
ಬರೆದುಕೊಂಡು ನಿಂತಿದ್ದೇನೆ.
ಬೀಸಿ ಕರೆಯಬಹುದಾಗಿದ್ದ ಕೈಗಳಿಂದ
ನೆನಪ ತಬ್ಬುತ್ತಿರುವ ಹುತ್ತ
ಕೆಡುವುತ್ತಾ ಕಾದಿದ್ದೇನೆ.
ಮರೆತ ಮಾತ ದಿಕ್ಕು ದಿಕ್ಕಿಗೆ ತೂರುತ್ತಾ
ಇನ್ನೂ...ಕಾಯಲೆ ಸಖ?

ಮತ್ತೆ ನೀ ಮರಳಿ ಬಂದೆಯಾದರೆ
ನೆನಪಿನ ಬಳ್ಳಿಗಳು ಜಗ್ಗಿ
ನಿನ್ನನ್ನು ಬಂಧಿಸಲಿ.
ಮಣ್ಣೊಳಗೆ ಮಣ್ಣಾದ ಕಣ್ಣ ಕೊನೆಗಳು
ಸ್ವಾಗತಿಸಲಿ, ಕಿವಿಗಳು ಆಲಿಸಲಿ.
ತುಟಿಗಳು ಬಿಚ್ಚಿ ಮಾತನಾಡಲಿ.
ಹೃದಯ ಸಂತೈಸಲಿ.

## ಸ್ವಗತ

ಮುಂಜಾವದ ತಂಪೊತ್ತಿನಲ್ಲಿ
ಕೆಂಪು ಹೃದಯದ ಹುಡುಗಿ
ರಸ್ತೆಯಂಚಿನಲ್ಲಿ ನಿಂತಿದ್ದಾಳೆ.
ಯಾಕೆ ? ಎಂದು ಕೇಳಬೇಕು,
ಹೇಗೆ ಕೇಳುವುದು?

ನೆಲವನ್ನು ಜಗ್ಗಿ ಹಿಡಿದಿರುವ ಕಾಲು.
ಸೋತು ತೂಗುತ್ತಿರುವ ಕೈಗಳು .
ದಿಟ್ಟಿಸಿ ದಿಟ್ಟಿಸಿ ಆಳಕ್ಕಿಳಿದಿರುವ ಕಣ್ಣು
ಇವಳನ್ನು ಸಂತೈಸಬೇಕು,
ಹೇಗೆ ಸಂತೈಸುವುದು?

ಹೃದಯ ತುಂಬಿ ತುಳುಕುತ್ತಿದೆ .
ಒಂದಾದರೂ ಹನಿ ಹಂಚಿಕೊಳ್ಳಿ
ಎಂದು ಕಂಡವರ ಕಾಡುತ್ತಿದ್ದಾಳೆ.
ಅವರೋ...ಬೆನ್ನಲ್ಲೆ ಮಾರುತ್ತರ
ಕೊಟ್ಟು ಸಾಗುತ್ತಿದ್ದಾರೆ .
ಇವಳಿಗೆ ಹೇಳಬೇಕು,
ಹೇಗೆ ಹೇಳುವುದು?

ಹೋಗು-
ಆ ತಾರೆಯರು ನಿನ್ನನ್ನು
ಅರ್ಥೈಸಿಕೊಳ್ಳುವರು
ಆ ಮರಗಳು ಅವರೆದೆಯೊಳಗೆ
ನಿನ್ನ ಕರೆದುಕೊಳ್ಳುವರು
ಆ ಚಂದಿರ ನಿನಗೆ ಜತೆಯಾದರೂ
ಆಗಬಹುದು ಎಂದು
ಇವಳಿಗೆ ಹೇಳಬೇಕು,

ಹೇಗೆ ಹೇಳುವುದು?

ಹುಡುಗಿ ಮರದಲ್ಲಿ
ಹೂವಾಗಿ ತೂಗುತ್ತಿದ್ದಾಳೆ.
ತಾರೆಯರು, ಚಂದಿರ,
ಮೋಡಗಳ ಮರೆಯಲ್ಲಿ
ಕುಳಿತು ಬಿಕ್ಕಳಿಸುತ್ತಿದ್ದಾರೆ
ದಳದಳ ಉದುರುತ್ತಿರುವ
ಕಣ್ಣೀರಿನಿಂದ ನೆಲ ಒದ್ದೆಯಾಗಿದೆ

ಹೀಗಾಗಬಾರದಿತ್ತು.

# ಇರುಳಿನಲ್ಲಿ ಬೆಳಗು

೧

ಸರಿರಾತ್ರಿಯಲ್ಲಿ ಹುಡುಗಿ
ಕನಸು ಕಾಣುತ್ತಿದ್ದಾಳೆ.
ಅವಳ ಕನಸು ಹೀಗಿದೆ:

ಪೇಪರಿನವನ ಚರಪರ
ಚಪ್ಪಲಿ ಸದ್ದಿನಲ್ಲಿ
ಹಾಲಿನವನ ಅವಸರದ ಗುದ್ದಿನಲ್ಲಿ
ಇಬ್ಬನಿಯಲ್ಲಿ ತೊಯ್ದ
ಹೂವಿನೊಡತಿಯ ದನಿಯಲ್ಲಿ
ಬೆಳಗಾಗಿದೆ

ಮುಲ್ಲ ಅಲ್ಲಾನಿಗಾಗಿ
ತುಟಿ ಬಿಚ್ಚಿದ್ದಾನೆ
ಮೈಕಾಸುರ ಮಂಜುನಾಥ
ಎಂದು ಕಿವಿ ಕಚ್ಚುತ್ತಿದ್ದಾನೆ.
ಬಂಗಾರದ ರಥ
ರಿಪೇರಿಗೆ ಹೋಗಿದೆ
ಬರಿಗ್ಗಾಲಲ್ಲೆ ನಡೆದು ಬಂಧ
ಸೂರ್ಯನ ಮುಖ ಕೆಂಪಾಗಿದೆ.

ಗಿಡಗಂಟೆಗಳ ಕೊರಳೊಳಗಿಂದ
ಹೊಮ್ಮಿದ ಹಕ್ಕಿಗಳ ಹಾಡನ್ನು
ಆಕಾಶವಾಣಿ ಮರುಪ್ರಸಾರ
ಮಾಡುತ್ತಿದೆ, ಕೇಳಲು
ತುಂಬಾ ಹಿತವಾಗಿದೆ.

೨

'ಬೆಳಗಾಯ್ತು'ಎಂದರಚುತ್ತಾ
ಹುಡುಗಿಯ ಅಮ್ಮ
ತಟ್ಟಿ ಎಬ್ಬಿಸುತ್ತಿದ್ದಾಳೆ.

ಹುಡುಗಿ ಕಿವುಡಿ-
ಅವಳಿಗೆ ಸದ್ದುಗದ್ದಲದಲ್ಲಿ
ಬೆಳಗಾಗುವುದಿಲ್ಲ.

ಹುಡುಗಿ ಕುರುಡಿ-
ಅವಳಿಗೆ ವರ್ಣರಂಜಿತ
ಬೆಳಗು ಕಾಣಲಾಗುವುದಿಲ್ಲ.

ಹುಡುಗಿ ಮೂಗಿ-
ಕನಸನ್ನೇಕೆ ಕಸಿದುಕೊಂಡೆ?
ಎಂದವಳು ಅಮ್ಮನನ್ನು
ಕೇಳುವುದಿಲ್ಲ.

ಸದ್ಯಕ್ಕವಳು ಇರುಳಿನಲ್ಲಿ
ಬೆಳಗಿನ ಕನಸು ಕಂಡ
ಖುಷಿಯಲ್ಲಿದ್ದಾಳೆ.

# ಯಾಕೆ ಬರಲಿಲ್ಲ ?

ತುಂಬ ತಡವಾಯಿತು ಗೆಳೆಯಾ
ಈ ತನಕ ಇದ್ದೆ ಇನ್ನಿಲ್ಲ.

ಬರುತ್ತೇನೆ ಎಂದು ಹೇಳಿದ್ದೆಯಲ್ಲ?
ಯಾಕೆ ಬರಲಿಲ್ಲ?

ನಾನು ಕಾದಿದ್ದೆ.
ಚುಕ್ಕಿಗಳ ಎಣಿಸುತ್ತ
ಇರುಳುಗಳ ಗುಣಿಸುತ್ತ.
ನಾನು ಕಾದಿದ್ದೆ , ನನ್ನದೇನೂ ತಪ್ಪಿಲ್ಲ.

ಹೌದು, ನಾನು ಕಾದಿದ್ದೆ,
ಹೃದಯ ಬಾವಲಿ ಆಗುವ ತನಕ.
ಮೈ ಇಬ್ಬನಿಯಾಗುವ ತನಕ.
ನಾನು ಕಾದಿದ್ದೆ,  ನನ್ನದೇನೂ ತಪ್ಪಿಲ್ಲ.

ಚಂಡಮಾರುತವಾಯಿತು ನಿಟ್ಟುಸಿರು.
ನಿನ್ನ ಸೆಳೆದು ತರಲಿಲ್ಲ,
ನೀನು ಬರಲಿಲ್ಲ.

ಆದರೆ ಪ್ರೀತಿಯ ಯುದ್ಧದಲ್ಲಿ ಗೆಳೆಯಾ,
ಎಲ್ಲಾ ಕ್ಷಮ್ಯ. ಚುಕ್ಕಿಗಳು ಹೊಳೆಯಲಿ
ನಿನ್ನ ಪಾಲಿಗೆ, ನಗಲಿ ಚಂದಿರ ನಿರಂತರ.
ಈ ರಸ್ತೆಗಳು ಮಾತ್ರ
ತಡೆದು ನಿಲ್ಲಿಸಲಿ ತಿಳಿಸದೆ
ನನ್ನ ಗೋರಿಯ ಹಾದಿಯ.

# ನಾ.... ಬರುತ್ತೇನೆ ಕೇಳು !

ಒಂದಲ್ಲ ಒಂದು ದಿನ ನಿನ್ನ
ಕನಸಿನಲ್ಲಿ ಸದ್ದಿಲ್ಲದೆ ಸುಳಿದು
ಬರುವವಳೇ...... ನಾನು
ಜಾಡಿಸಿ ಒದ್ದೋಡಿಸಿದರೆ
ಬಾಗಿಲ ಕಟಕಟಾಯಿಸಿವೆನು.
ನಿನ್ನ ಪೊಗರು ಮಾತೆಲ್ಲ ಗಾಳಿಯಲ್ಲಿ
ತೂರಿ ಹೋಗುವ ಹಾಗೆ ಗೆಜ್ಜೆ-
ಝಣಗುಟ್ಟಿಸುವೆನು, ಕಣ್-
ತಪ್ಪಿಸಿಯಾದರೂ ಒಳನುಗ್ಗುವೆನು.

'ಹಠಮಾರಿ ಹೆಣ್ಣು' ಎಂದು
ಅನ್ನುವಿಯಾದರೆ ಅನ್ನು,ಆದರೆ
ಅತ್ತಿಂದಿತ್ತ ಗೋಣಾಡಿಸಿ ಮಾತ್ರ
ತುಂಟ ಕಂಗಳಿಗೆ ಎರಚದಿರು ಮಣ್ಣು.
ದಯವಿಟ್ಟು ದಯೆಯಿಟ್ಟು ದಾರಿಬಿಡು.
ಕೆಣಕದೆ, ಒಳಗೇನಿದೆಯೆಂದು
ಇಣುಕಿ ನೋಡುವೆನು, ಗುಲಾಬಿ
ಮೃದುಪಾದದ ಹೆಜ್ಜೆಯಿಟ್ಟು
ನೋವಾಗದ ಹಾಗೆ ನಡೆದಾಡುವೆನು.
ಖಾಲಿಯೆನಿಸಿದರೆ ಒಂದಿಷ್ಟು
ಹಸಿರ ಬೆಳಸುವೆನು.

ನೋಡು : ನಾಳಿನ ದಿನ ಕಣ್ಣ ಪೊರೆ
ಕಳಚಿ , ನೆನಪು ನಿಚ್ಚಳವಾಗಿ,
ಮಸುಕು ಹೆಜ್ಜೆಯನ್ನಪ್ಪಿ, ನೀ...
ಬಿಕ್ಕಳಿಸುವಾಗ ಸಾವಿರ ಮೈಲುಗಳಾಚೆ
ಸಮಶೃತಿಯಲ್ಲಿ ನುಡಿಯಬಹುದು
ನನ್ನ ಗೆಜ್ಜೆಯ ಗುನುಗು.

ಆಗ : ಬಾಜಾ-ಬಜಂತ್ರಿ ನುಡಿಸಿ
'ಸುಸ್ವಾಗತ' ಫಲಕ ತೂಗು ಹಾಕಿದರೂ
ತಿರುಗಿ ನೋಡುವವಳಲ್ಲ ನಾನು.
ಎರಡೂ ಕೈ ಚಾಚಿ 'ಬಾ' ಎಂದು
ಕರೆದರೂ ಬರುವವಳಲ್ಲ ನಾನು
ಬರಬೇಕೆನಿಸಿದರೂ ಬರಲಾಗುವುದಿಲ್ಲ ಕೇಳು!
ಹಿಂದಿರುಗಿ ಬರಲಾರದಷ್ಟು ದೂರ
ಹೋದ ಮೇಲೆ ಹೇಗೆ ಬರುವುದು ಹೇಳು?

## ಪದ್ಯವಾಗಲಿಲ್ಲ

ಕಡಲ ಕಪ್ಪೊಳಗೆ
ನಕ್ಷತ್ರಗಳು ಅರಳಿದ್ದವು.
ಒಂಟಿ ಮೋಡಗಳು
ರೆಕ್ಕೆ ಬೀಸುತ್ತಿದ್ದವು.
ಚಂದಿರ ಈಸುತ್ತಿದ್ದ.

ಸಾವಿರ ಸಾವಿರ ಹಳ್ಳಕೊಳ್ಳಗಳು
ಕಡಲನ್ನು ಹೆಣೆದವು.
ಅದೇ ಕಡಲು ಹೊಳೆಯಾಗಿ
ಹಾಳೆಯ ಮೇಲೆ ಹನಿದು, ಹರಿದು
ಪದ್ಯವಾಯಿತು.

ಕಪ್ಪು ಕಡಲ ಮೊಗದಲ್ಲಿ
ಕಣ್ಣುಗಳು ನಕ್ಷತ್ರಗಳಂತೆ ಅರಳಿದ್ದವು.
ಮುಂಗುರುಳು ರೆಕ್ಕೆ ಬೀಸುವ
ಒಂಟಿ ಮೋಡಗಳ ಹಾಗೆ
ತುಟಿಯಂಚಿನಲ್ಲಿ ಬೆಳದಿಂಗಳ ನಗೆ.

ಕಣ್ಣು, ತುಟಿ, ಮುಂಗುರುಳು
ಹೊಳೆಹೊಳೆದು ಹಾಳೆಯ ಮೇಲೆ
ಪದ್ಯವಾಯಿತು.

ತಾರೆಯರು, ಮೋಡಗಳು
ಪದ್ಯವಾದವು.
ಕಣ್ಣುಗಳು , ಮುಂಗುರುಳು
ಪದ್ಯವಾದವು.

ಪದ್ಯವಾಗಬೇಕು ಅಂತ

ನನಗೂ ಅನಿಸಿತು
ಕಡಲ ಕನ್ನಡಿಯೊಳಗೆ ಇಣುಕಿದೆ
ಬಿಂಬ ಕಾಣಲಿಲ್ಲ.
ಕಣ್ಣ ಕನ್ನಡಿಯೊಳಗೆ ಇಣುಕಿದೆ
ನನ್ನ ಬಿಂಬವಾಗಿರಲಿಲ್ಲ.

ನಾನು ಪದ್ಯವಾಗಲಿಲ್ಲ.

# ಸಂವಾದ

ಆಕಾಶ
ಇಬ್ಬನಿಯ ಹಾಗೆ ಕರಗುತ್ತಲಿದೆ.
ಸೂರ್ಯ
ಬಾವಲಿಯಾಗಿದ್ದಾನೆ.
ಬೆಟ್ಟಗುಡ್ಡ, ಕಣಿವೆ-ಕಂದರಗಳು
ಚಂದಿರನನ್ನು ನುಂಗುತ್ತಲಿವೆ.
ಚುಕ್ಕಿಗಳ ಕಂಗಳಿಗೆ ಪೊರೆ ಬಂದಿದೆ.
ಮೋಡಗಳು ರೆಕ್ಕೆ ಕಟ್ಟಿಕೊಂಡು
ವಲಸೆ ಹೋಗುತ್ತಿವೆ.
ಕಪ್ಪನ್ನು ಹೊದ್ದ ರಸ್ತೆಗಳು
ಮುಸುಕಿನೊಳಗೆ ಬಿಕ್ಕುತ್ತಿವೆ.
ನನ್ನ ಮುದ್ದು ಕವಿತೆಯ
ಕಳೇಬರವನ್ನು ಇರುವೆಗಳು
ಮೆರವಣಿಗೆಯಲ್ಲಿ ಒಯ್ಯುತ್ತಿವೆ.

ಸಹಾಯ! ಹೆದರಿಕೆಯಾಗುತ್ತಿದೆ.

೨
ಪುಟ್ಟ ಹುಡುಗಿ ........ಹೆದರಬೇಡ!
ನಾನಿಲ್ಲಿಯೇ ಇದ್ದೇನೆ.
ನನ್ನದೆಯ ಮೇಲೆ ಒರಗಿಕೊ...
ಮೆಲ್ಲಗೆ ತಟ್ಟುತ್ತೇನೆ.
ಹಿತವಾಗಿ ತೆರೆದುಕೊ...
ಸುಂದರ ಕನಸುಗಳನ್ನು ಕರೆಯುತ್ತೇನೆ.
ಬೆಚ್ಚಗೆ ಮಲಗಿಕೊ...
ನಾಳೆಗಳು ಸುಂದರವಾಗಿರುತ್ತವೆ.

ಬೆಚ್ಚಗೆ ಮಲಗಿಕೊ...
ನಾಳೆಗಳು ಸುಗಂಧಮಯವಾಗಿರುತ್ತವೆ.
ಬೆಚ್ಚಗೆ ಮಲಗಿಕೊ...
ನಾಳೆಗಳು ಸುಖಮಯವಾಗಿರುತ್ತವೆ.
ಬೆಚ್ಚಗೆ ಮಲಗಿಕೊ...

## ನಾನು ಮತ್ತು ಅವನು

೧

ಅವನ ಕಣ್ಣಲ್ಲಿ...
ಬೆಟ್ಟಗಳು ಬೆಳೆಯುತ್ತಿದ್ದವು
ತಾರೆಯರು ಹೊಳೆಯುತ್ತಿದ್ದವು.

ಬಣ್ಣಗಳು ಅರಳುತ್ತಿದ್ದವು.
ಮೋಡಗಳು ಹೊರಳುತ್ತಿದ್ದವು.

ಮಳೆ ಸುರಿಯುತ್ತಿತ್ತು.
ಹೊಳೆ ಹರಿಯುತ್ತಿತ್ತು.

ಹಗಲು ಉರಿಯುತ್ತಿತ್ತು.
ಇರುಳು ತಂಪೆರೆಯುತ್ತಿತ್ತು.
ನನಗೊ... ಅಚ್ಚರಿ!

೨

ನಾನು ಬೆಟ್ಟವನ್ನೇರಿ
ಮೋಡಗಳೊಂದಿಗೆ ಮಾತಾಡುತ್ತಿದ್ದೆ.

ಬಣ್ಣಗಳನ್ನು ಬಳಿದುಕೊಂಡು
ಮಳೆಯಲ್ಲಿ ಮೀಯುತ್ತಿದ್ದೆ.

ಹೊಳೆಯಲ್ಲಿ ಮುಳುಗಿ
ತಾರೆಯರನ್ನು ಆರಿಸುತ್ತಿದ್ದೆ.

ನನಗೆ ಖುಷಿ.

೩

ಈಗ
ನಾನೆ ಮೋಡವಾಗಿದ್ದೇನೆ.
ನಾನೆ ಬೆಟ್ಟವಾಗಿದ್ದೇನೆ.
ನಾನೆ ಬಣ್ಣವಾಗಿದ್ದೇನೆ.

ಈಗ
ನಾನು ಮಳೆಯಾಗಿದ್ದೇನೆ.
ನಾನು ಹೊಳೆಯಾಗಿದ್ದೇನೆ.
ನಾನು ಇರುಳಾಗಿದ್ದೇನೆ.

ಅವನ ಕಣ್ಣಲ್ಲೆ ಕರಗುತ್ತ
ಅವನೊಳಗೆ ಇಳಿದಿದ್ದೇನೆ.
ಲಯವಾಗಿದ್ದೇನೆ.

## ಈ ಗೆಳೆತನ.........

ನನ್ನೆಲ್ಲಾ ಪದ್ಯಗಳಲ್ಲಿರುವಂತೆ
ಇಲ್ಲೂ ತಾರೆ, ಮೋಡ, ಗಾಳಿ, ಕಡಲು, ಸೂರ್ಯರಿದ್ದಾರೆ.
ನಿನಗಿಷ್ಟವಾದರೆ ಓದು ಒತ್ತಾಯವಿಲ್ಲ
ಇಷ್ಟವಾಗದಿದ್ದರೆ ಬೇಡ
ಕಿಂಚಿತ್ತೂ ಕೋಪವಿಲ್ಲ.

ಆದರೆ ನಾನು ಪ್ರೀತಿಸುವ
ಗಾಳಿ, ಮೋಡ, ತಾರೆಯರನ್ನು
ನಿಂದಿಸಬೇಡ.
ಅವರ ಬಗ್ಗೆ ಯಾಕೆ ಬರೆಯುತ್ತಿ?
ಎಂದು ಕೇಳಬೇಡ.
ಅವರ ಬಗ್ಗೆ ಎಷ್ಟು ಬರೆಯುತ್ತಿ?
ಎಂದು ಕಾಡಬೇಡ.

ನಾನೀಗ-
ನನ್ನ-ನಿನ್ನ ಗೆಳೆತನದ ಬಗ್ಗೆ
ಬರೆಯುತ್ತಿದ್ದೇನೆ.
ನಿನ್ನ ಗೈರು ಹಾಜರಿಯಲ್ಲಿ
ತಾರೆ, ಸೂರ್ಯ, ಮೋಡ, ಗಾಳಿ
ನನ್ನ ಜತೆಯಲ್ಲಿದ್ದಾರೆ.

ಈ ಗೆಳೆತನ ಮೋಡಗಳ ಹಾಗೆ.
ನಾಲ್ಕು ಹನಿ ತಂಪು ಚೆಲ್ಲುತ್ತೇನೆ
ಎಂದು ಹೇಳುವುದಿಲ್ಲ.
ಚೆಲ್ಲಬೇಡ ಎಂದರೆ
ಕೇಳುವುದೂ ಇಲ್ಲ.

ಈ ಗೆಳೆತನ ಕಡಲೊಳಗಿನ
ಅಲೆಗಳ ಹಾಗೆ.
ತಡಿಯಲ್ಲಿ ನಿಂತರೆ ಓಡಿಬಂದು
ಕಾಲನ್ನು ಚುಂಬಿಸುತ್ತದೆ. -
ಚುಂಬಿಸುತ್ತೇನೆ ಎಂದು ಹೇಳುವುದಿಲ್ಲ

ಚುಂಬಿಸಬೇಡ ಎಂದರೆ
ಕೇಳುವುದೂ ಇಲ್ಲ.

ಈ ಗೆಳೆತನ ಗಾಳಿಯ ಹಾಗೆ.
ಎದೆಯೊಳಗೆ ನುಗ್ಗಿ ಹೊರಬರುತ್ತದೆ.
ಹೋಗುತ್ತೇನೆ ಎಂದು ಹೇಳುವುದಿಲ್ಲ.
ಹೋಗಬೇಡ ಎಂದರೆ
ಕೇಳುವುದೂ ಇಲ್ಲ.

ಆದರೂ ಅನಿಸುತ್ತದೆ.
ಒಮ್ಮೊಮ್ಮೆ ಈ ಗೆಳೆತನ
ಧೂಳಿನ ಹಾಗೆ ಮೆತ್ತಿಕೊಳ್ಳುತ್ತದೆ.
ಕೊಡವಿದರೆ ಚದುರಿ
ಚೆಲ್ಲಿ ಹೋಗುತ್ತದೆ.

ಹೌದು
ನನ್ನ-ನಿನ್ನ ಗೆಳೆತನದಲ್ಲಿ
ಮೆಚ್ಚುವಂಥಾದ್ದು ಇದೆ
ಚುಚ್ಚುವಂಥಾದ್ದು ಇದೆ
ಕೊಚ್ಚಿ ಹರಿದು ಹೋಗುವಂಥಾದ್ದು ಇದೆ.

ಅಂದಹಾಗೆ ಗೆಳೆಯಾ...
ಈ ಗೆಳೆತನದಲ್ಲಿ ನಾನು
ಶಾಮೀಲಾಗಿದ್ದರೂ ಇದು
ಇಡಿಯಾಗಿ ನಿನ್ನನ್ನು ಕುರಿತೆ
ಬರೆದ ಕವನ. ನಿಜ,
ಬರೆ ಎಂದೇನೂ ನೀನು ಕೇಳಿಲ್ಲ.
ಆದರೆ ಬರೆಯಬೇಡ ಎಂದರೆ ನಾನು ಕೇಳುವುದೂ ಇಲ್ಲ.

# ಚಿತ್ರ ಪೂರ್ಣಗೊಳಿಸಲಾರೆಯಾ ?

೧

ಅಂಗಳದ ತುಂಬಾ
ಮುತ್ತು ಪೋಣಿಸಿದ
ಹಾಗೆ ಚುಕ್ಕಿಗಳ
ಚಿತ್ತಾರ .........
ಚಿತ್ತಾರದಲ್ಲಿನ ಚೌಕಗಳಲ್ಲಿ
ನೀಲಿ, ಬಿಳಿ, ಗುಲಾಬಿ,
ನೇರಳೆ ರಂಗುಗಳ
ಕಲಸು ಮೇಲೋಗರ.
ಭಾವಗಳ ಆಳ
ಬಣ್ಣಗಳ ಮೇಳ
ಚಿತ್ರದ ಜೀವಾಳ.

೨

ಪರಿಕರಗಳ ಅಭಾವ
ಚಿತ್ರ ಪೂರ್ಣಗೊಳಿಸಲಾಗಲಿಲ್ಲ.
ಮಾತು ಬಣ್ಣ ಕಟ್ಟಿದ
ಭಾಷೆಯಲ್ಲ ಗೆಳೆಯಾ ...
'ಸುತ್ತು ಬಳಸಿದ ಮಾತು'
ಸಲ್ಲ....ಎಂದೆನ್ನುವಿಯಾದರೆ
ಕೇಳು-
ಅಂಗಳ ನನ್ನೀ ಹೃದಯ
ನಿನ್ನದೇ ಚಿತ್ರ ಎಲ್ಲಾ ......

೩

ತಿದ್ದಿ, ತೀಡಿ, ಓರಣ-
ಗೊಳಿಸಿದ್ದಾಗ್ಯೂ ಅರೆಬರೆ

ಅರ್ಥ, ಅಲಂಕಾರ.
ಒಂದಿಷ್ಟು .......... ನಿನ್ನ
ಕ್ರೌರ್ಯ, ಮಾತ್ಸರ್ಯ
ಪರಿಚಯಿಸುವಿಯಾದರೆ
ಕೆಂಪು-ಹಳದಿ ಹುಡಿ
ಹಾರಿಸಿ ಅನಾವರಣ-
ಗೊಳಿಸುತ್ತೇನೆ ಚಿತ್ರ-
ಪೂರ್ಣಗೊಳಿಸಲಾರೆಯಾ?

## ಬಿಕ್ಕಳಿಸಿ ಅಳದಿರಲಿ......... ಪ್ರೀತಿ

ಕನಸು, ಕಾಮನಬಿಲ್ಲಿನಲ್ಲಿ,
ಜೂಗಳಿಸುವ ಗಿಡಮರ
ಬಳ್ಳಿ ಹೂವಿನಲ್ಲಿ,
ಚುಕ್ಕಿ ಚಂದ್ರಮರ
ನಗೆ ಬೆಳದಿಂಗಳಿನಲ್ಲಿ,
ಹೊರಳುವ ಅಲೆಯ ಪರಿಮಿತ
ಲಯಬದ್ಧ ಸಂಗೀತದಲ್ಲಿ,
ಮಗ್ನಲಾದ ಮುಂಜಾವಿನ
ಅರಳು ನೋಟದ ಬೆಳಕಿನಲ್ಲಿ,
ಚಿಲಿಪಿಲಿ ಸಂಗೀತದಲ್ಲಿ
ಮುಕ್ಕಳಿಸಿ ನಗಲಿ ನಮ್ಮಿಬ್ಬರ ಪ್ರೀತಿ.

ಒತ್ತಿ ಉರುಳುವ ಮರಳು,
ಕೂಗಿ ಕಂಗೆಡಿಸುವ ಕೊರಳು,
ಬಿರುಬಿಸಿಲು, ಬಿರುಗಾಳಿಯ ಬೀಸು,
ಕಲ್ಲುಮುಳ್ಳಿನ ಹಾಸು,
ಬಿಕ್ಕಳಿಸುವ ಬಾನು, ಗದಗುಟ್ಟಿಸುವ ಕಾನು,
ಗುಡುಗು-ಮಿಂಚಿನಲ್ಲೂ .......
ಬಿಕ್ಕಳಿಸಿ ಅಳದಿರಲಿ ನಮ್ಮಿಬ್ಬರ ಪ್ರೀತಿ

# ಈ ಒಂದು ಕ್ಷಣದ ಹಿಂದೆ ........

ಈ ಒಂದು ಕ್ಷಣದ ಹಿಂದೆ ....
ನಿನ್ನ ಬಾದಾಮಿ ಕಣ್ಣುಗಳ
ಪರಿಚಯ ನನಗಿರಲಿಲ್ಲ.
ನಿನ್ನ ಬೆವರಿನ ಪರಿಮಳಕ್ಕೆ
ನನ್ನ ಮೂಗು ಅರಳುತ್ತದೆಯೆಂದು
ನನಗೆ ಗೊತ್ತಿರಲಿಲ್ಲ.

ಈ ಒಂದು ಕ್ಷಣದ ಹಿಂದೆ ....
ನಿನ್ನ ಬೆಚ್ಚನೆಯ ಎದೆಯಲ್ಲಿ
ಮರೆತ ಸಂಗತಿಗಳಿರುತ್ತವೆ
ಎಂದು ನನಗೆ ಗೊತ್ತಿರಲಿಲ್ಲ.
ನನ್ನ ಪ್ರೀತಿವಂಚಿತ ಕವಿತೆಗೆ
ನೀನು ಬಣ್ಣದ ಅಂಗಿ ತೊಡಿಸುತ್ತಿ
ಎಂದು ತಿಳಿದಿರಲಿಲ್ಲ.

ಈ ಒಂದು ಕ್ಷಣದ ಹಿಂದೆ ........
ನಿನ್ನ ಭಾರವಾದ ಹೆಜ್ಜೆಗಳು
ನನ್ನ ದಣಿಸುತ್ತವೆ
ಎಂದು ತಿಳಿದಿರಲಿಲ್ಲ.
ನಿನ್ನ ಬಾಡಿದ ಕೆನ್ನೆಗಳು
ನನ್ನನ್ನು ಕಂಗೆಡಿಸುತ್ತವೆ
ಎಂದುಕೊಂಡಿರಲಿಲ್ಲ.

ಈ ಒಂದು ಕ್ಷಣದ ಹಿಂದೆ ......
ನಿನ್ನ ತುಟಿಯಲ್ಲಿ ವಸಂತನ
ನಗುವನ್ನು ಕಂಡು
ಓಡಿಬಂದಿದ್ದೆನಾದರೂ

ಇದೀಗ ಮಂಜಿನಲ್ಲಿ ಇಡಿಯಾಗಿ
ಹೂತುಹೋಗಿದ್ದೇನೆ.

ಈ ಒಂದು ಕ್ಷಣದ ಹಿಂದೆ ...
ಬೆಳಗಿನ ಸೂರ್ಯನನ್ನು
ಭೇಟಿಯಾಗೋಣ ಎಂದು
ಕರೆದದ್ದು ನೀನೆ.
ಇದೀಗ ಮುಸ್ಸಂಜೆ
ಹೊರಡೋಣ ಅನ್ನುತ್ತಿದ್ದೀಯಾ...
... ಎಂತಹ ಕೊನೆ??

# ನೋಡಬೇಡ ತಿರುಗಿ

(ಪೂರ್ವಾರ್ಧ)

ಯಾರಲ್ಲಿ? ಯಾರಿದ್ದೀರಿ?
ಬಂದಿದ್ದೇನೆ. ಬಾಗಿಲು ತೆಗೆಯಿರಿ.

ಈತನಕ ಇದ್ದಳು, ಈಗಿಲ್ಲ
ಎಂದರೆ ಹೇಗೆ ನಂಬಲಿ?

ಕಿಟಕಿಗಳ ತೆರೆದುಕೊಳ್ಳಿ
ಬಾಗಿಲುಗಳ ತೆರೆದುಕೊಳ್ಳಿ
ಬಂದಿದ್ದೇನೆ, ಕರೆದುಕೊಳ್ಳಿ.

ಹೌದು, ಇಲ್ಲೇ ಈ ಕಿಟಕಿಯ ಬಳಿ ಕುಳಿತು
ತಾರೆಯರನ್ನು ಎಣಿಸುತ್ತಿದ್ದಳು.
ಈಗ ಆಕಾಶ ಬಟಾಬಯಲು
ಸುರಿಯುತ್ತಿದೆ ಕತ್ತಲು.

ಹೌದು. ಇಲ್ಲೇ ಈ ಮೇಜಿನ ಮೇಲೆ
ತಲೆಯಿಟ್ಟು ಕವಿತೆ ಬರೆಯುತ್ತಿದ್ದಳು.
ಈಗ ಮೌನದ ಕಾವಲು
ನೆನಪುಗಳ ನೆರಳು.

(ಉತ್ತರಾರ್ಧ)

ಗೆಳೆಯಾ...
ನಿನ್ನನ್ನು ಹೇಗೆ ಸಂತೈಸಲಿ?

ಅದೊ... ಈ ಮೂಲೆಯಲ್ಲಿ
ಬೆಂದು ಬೂದಿಯಾದ ಕವಿತೆಗಳ
ತುಣುಕುಗಳಿವೆ ಆಯ್ದುಕೊ...
ಹಠಮಾರಿ ಗಾಳಿ ಇಡಿಯಾಗಿ
ಹಂಚಿಕೊಳ್ಳುತ್ತಿದೆ
ತಡಮಾಡದೆ ಕಸಿದುಕೊ...

ದಯವಿಟ್ಟು ಹೋಗು
ಯಾವತ್ತಿಗೂ ಇಲ್ಲ ನಿನ್ನ ಹುಡುಗಿ
ಕದ ಮುಚ್ಚಿಕೊ...
ನೋಡಬೇಡ ತಿರುಗಿ.

# 'ಪ್ರೀತಿ'

'ಪ್ರೀತಿ'
ಅದೇನು? ಎಂದು
ಯಾಕೆ ಕೇಳುತ್ತೀರಿ?
ಕಡಲನ್ನು ನೋಡಿದ್ದೀರಾ?
ಹಾಗಾದರೆ ಸುಮ್ಮನಿರಿ.

'ಪ್ರೀತಿ'
ಪರಿಚಯಿಸಿ ಅಂದಿರಾ?
ತುಂಬಾ ಸುಲಭ.
ಒಮ್ಮೆ ಅಗಸವನ್ನು
ಕಣ್ಮುಂದೆ ಕರೆಯಿರಿ.

'ಪ್ರೀತಿ'
ಪ್ರಿಯವಾಗುತ್ತದೆ.
ಯಾಕೆಂದರೆ ಅದಕ್ಕೆ
ಬಣ್ಣವಿದೆ, ರುಚಿಯಿದೆ,
ವಾಸನೆಯಿದೆ.

'ಪ್ರೀತಿ'
ಶೂನ್ಯಕ್ಕೆ ಸಮ.
ಯಾಕೆಂದರೆ ಅದು
ಎಲ್ಲವೂ ಹೌದು
ಏನೇನೂ ಅಲ್ಲ!

'ಪ್ರೀತಿ'
ಪ್ರಕೃತಿ. ಅದು ಹೂವಾಗುತ್ತದೆ,
ಕಾಯಾಗುತ್ತದೆ , ಹಣ್ಣಾಗುತ್ತದೆ.
ಮತ್ತೆ ಬೀಜವಾಗುತ್ತದೆ.

# ಪ್ರಾರ್ಥನೆ

ನೀವು ನಗೆ ದೀವಟಿಗೆಗಳನ್ನು
ಖರೀದಿಸುತ್ತೀರಾ?
ನೀವು ಚಿಗಿತ ಆಸೆಗಳನ್ನು
ಖರೀದಿಸುತ್ತೀರಾ?
ನೀವು ಕುಪ್ಪಳಿಸುವ ಕನಸುಗಳನ್ನು
ಖರೀದಿಸುತ್ತೀರಾ?
ಹಾಗಾದರೆ ನಮ್ಮಲ್ಲಿಗೆ ಬನ್ನಿ.
ನಮ್ಮಲ್ಲಿ ಲಾಟರಿ ಟಿಕೇಟು
ಮಾರುವ ಪುಟ್ಟ ಹುಡುಗರಿದ್ದಾರೆ.
ಕಣ್ಣಲ್ಲೆ ಕಟ್ಟಿ ಹಾಕುತ್ತಾರೆ.
ಪ್ರೀತಿಯಿಂದ ಅಂಟಿಕೊಳ್ಳುತ್ತಾರೆ.
ಆಸೆ-ಕನಸುಗಳನ್ನು ಹರವಿ
ಬೆಲೆ ಮಂಡಿಸುತ್ತಾರೆ.
ಒಂದು ರೂಪಾಯಿ ತೆತ್ತು ಖರೀದಿಸಿದರೆ
ಕೈ ಮುಗಿದು ಕೃತಜ್ಞತೆ ಸಲ್ಲಿಸುತ್ತಾರೆ.
ಶುಭ ಹಾರೈಸುತ್ತಾ ಬೀಳ್ಕೊಡುತ್ತಾರೆ.

ಅಂತೆಯೆ...
ಒಮ್ಮೆ ನಮ್ಮಲ್ಲಿಗೆ ಬನ್ನಿ.
ನಮ್ಮ ಹುಡುಗರ ತುಟಿಯಂಚಿನ
ನಗೆಯನ್ನು ಖರೀದಿಸಿ.
ನಮ್ಮ ಹುಡುಗರ ಕಣ್ಣಂಚಿನ
ಕನಸುಗಳನ್ನು ಖರೀದಿಸಿ.
ನಮ್ಮ ಹುಡುಗರ ಮೋರೆಯಲ್ಲಿ
ಚಿಗಿತ ಆಸೆಗಳನ್ನು ಖರೀದಿಸಿ.
ನಮ್ಮ ಹುಡುಗರ ನಾಳೆಗಳನ್ನು
ನಿಮ್ಮ ಜೇಬುಗಳಲ್ಲಿ
ಭದ್ರಪಡಿಸಿ ಸಂರಕ್ಷಿಸಿ.

# ಕುದುರೆ ಮತ್ತು ಮುತ್ತುಗಳು

ಮುತ್ತಿನಂತಹ ಅಕ್ಕಂದಿರಿಬ್ಬರನ್ನು
ಕುದುರೆಯೊಂದು ಕೆಡವಿ
ಕಂಗೆಡಿಸಿದ ಸುದ್ದಿ
ನಿಮಗೂ ತಲುಪಿರಬಹುದು.

ಅಕ್ಕಂದಿರೇ ಹುಚ್ಚುತನದಿಂದ
ಕುದುರೆಯನ್ನು ಕೆಣಕಿ ಕಂಗೆಟ್ಟರೆಂದು
ಹಬ್ಬಿಸಿದ ಸುದ್ದಿಯನ್ನು
ನೀವು ನಂಬಿರಲೂಬಹುದು.

ಬಯಲೊಳಗೆ
ಬಯಲಾದರಂತೆ ಅಕ್ಕಂದಿರು
ಧೂಳೊಳಗೆ ಮೈ ಮುಚ್ಚಿಕೊಂಡವರನ್ನು
ಮೆರವಣಿಗೆಯಲ್ಲಿ ಕುಣಿಸಿದರಂತೆ
ಮಾನವಂತರು .

ಎಚ್ಚರವಾಗಿರುವ ರಸ್ತೆಗಳೆ
ನೀವು ಕಂಡಿರೆ... ನೀವು ಕಂಡಿರೆ...
ಸುಡುವ ಸೂರ್ಯಗಳೆ
ನೀವು ಕಂಡಿರೆ... ನೀವು ಕಂಡಿರೆ...
ಮೈ ತುಂಬ ಎಲೆರೆಪ್ಪೆಗಳನ್ನು
ಅಂಟಿಸಿಕೊಂಡಿರುವ ಮರಗಳೆ
ನೀವು ಕಂಡಿರೆ... ನೀವು ಕಂಡಿರೆ...

ನನ್ನಕ್ಕಂದಿರನ್ನು ಹಣ್ಣು ಮಾಡಿದ
ಹುಣ್ಣುಗಳಾರು ನೀವು ಹೇಳಿರೆ...
ನನ್ನಕ್ಕಂದಿರ ಹೃದಯ ಗೋರಿಗೊಳಿಸಿ

ವಿಜಯಪತಾಕೆ ಹಾರಿಸಿದ
ಶೂರರಾರು ನೀವು ಹೇಳಿರೆ...
ಎಂದು ಪ್ರಲಾಪಿಸುವುದು ವ್ಯಥ.

ಎಲ್ಲರ ಒಳಹೊಕ್ಕು ಶೋಧಿಸುವ
ಗಾಳಿಗೆ ಮಾತು ಬರುವಂತಿದ್ದರೆ?!
ಮಾತಿರಲಿ-
ಮೌನವನ್ನು ಮಣಿಸಬಲ್ಲ
ಮಹಾಶಯರಿರುವ ಈ ನಾಡಿನಲ್ಲಿ
ಕುದುರೆಯ ಕೆನೆತವಷ್ಟೆ ಸತ್ಯ.
ಉಳಿದದ್ದೆಲ್ಲ ಮಿಥ್ಯ.

## ಯುದ್ಧ

ನಾನು ನನ್ನ ದೇಶದ ಗಡಿಯನ್ನು
ಕೊಳೆಯದ ಹೆಣಕ್ಕೆ ಹೋಲಿಸುತ್ತೇನೆ.
ನಿತ್ಯ ಕಾವಲು ಕಾಯುವ ನೂರು
ಕಣ್ಣುಗಳಿಗಾಗಿ ದುಃಖಿಸುತ್ತೇನೆ.

ಹಸಿರು ಉಸಿರಾಡದ ಮರಗಳಿಗಾಗಿ
ಗೂಡು ಕಟ್ಟದ ಹಕ್ಕಿಗಳಿಗಾಗಿ
ಬೇವನ್ನೆ ನೆಚ್ಚಿ ಸಾಯುವ ಕೋಗಿಲೆಗಳಿಗಾಗಿ
ದುಃಖಿಸುತ್ತೇನೆ.

ನೀರವತೆಯಲ್ಲಿ ನರ್ತಿಸುವ
ಸದ್ದುಗಳ-ಆಕ್ರಂದನಗಳ
ಜುಗಲಬಂದಿ
ನನ್ನನ್ನು ಕಂಗೆಡಿಸುತ್ತದೆ.

ಕೆಂಪು ಸೂರ್ಯನನ್ನು ಹಣೆಗಿರಿಸಿಕೊಂಡು
ಹಳದಿ ಸೇವಂತಿಗೆಯನ್ನು ಮುಡಿಗಿರಿಸಿಕೊಂಡು
ನಿರೀಕ್ಷೆಯಲ್ಲೆ ನಲುಗಿಹೋಗುವ
ನೂರು ಹೆಣ್ಣುಗಳಿಗಾಗಿ ದುಃಖಿಸುತ್ತೇನೆ.

ಬೆಳದಿಂಗಳ ರಾತ್ರಿಗಳನ್ನು
ಮಲ್ಲಿಗೆಯ ಹಗಲುಗಳನ್ನು
ಮುದ್ದಿಸಬೇಕಾದ ಕಣ್ಣುಗಳು
ಯಮನ ಕಣ್ಣುಗಳಲ್ಲಿ
ಮುಗುಳು ನಗುವುದು
ನನ್ನನ್ನು ಕಂಗೆಡಿಸುತ್ತದೆ.

ಯುದ್ಧ ನನ್ನನ್ನು ಕಂಗೆಡಿಸುತ್ತದೆ.
ಬುದ್ಧ ನನ್ನನ್ನು ಸಂತೈಸುತ್ತಾನೆ.

## ನವ್ಯ

ಅದೇ ನೆಲ ಅದೇ ಜಲ
ಎದೆ ಸೀಳಿ ಹೊರಬಂದ
ಚಿಗುರುಗಳ ಮತ್ತದೇ
ಹಳೆಯ ಬೀಜದ ಫಲ

ಅಲ್ಲಿ...... ಇಲ್ಲಿ......
ಗಾಳಿಗುಂಟ ತೇಲಿಬಂದ
ಹೊಸತನದ ವಾಸನೆ ಕುಡಿದು
ಅಮಲಿನಲ್ಲಿ ತಲೆಕುಣಿಸಿ
ತೊನೆದಾಡುವ ಶೈಲಿ-

ಹಳೆಯದನ್ನೆ ಹೊಸದಾಗಿ
ನೋಡುವ ವಿಚಿತ್ರ ಖಯಾಲಿ
ಸಂಭ್ರಮಿಸಿ ಎತ್ತಿಕಟ್ಟಿದ್ದು
ಮತ್ತದೇ ಹಳೆಯ ಬೇಲಿ!

# ಹೇಳಲೇಬೇಕಾದ ಮಾತುಗಳು

ಹೇಳಬಾರದು. ಅಂದುಕೊಂಡರೂ
ದಿಗ್ಗನೆ ಎದೆಗೆ ಒದ್ದು
ದುಡುದುಡು ಓಡಿಬಂದು
ಗಂಟಲಲ್ಲಿ ಗಕ್ಕನೆ ಕೂತು
ಹೊರಳಿ-ತೆವಳಿ ನಾಲಿಗೆಯ
ತುದಿಗೆ ಬಂದು ನಿಂತಾಗ
ಕಿಕ್ಕಿರಿದ ಸಭಾಂಗಣದಲ್ಲಿ
ಹೆಜ್ಜೆತಪ್ಪಿದ ನರ್ತಕಿಯಂತೆ
ಗೆಜ್ಜೆ ಧ್ವನಿಗಳೂ ಅಸ್ಪಷ್ಟ
ಹಾವ ಭಾವಗಳು ಮಾತ್ರ
ಕಂಗಳಲ್ಲಿ ವ್ಯಕ್ತ.

# ಹುಡುಗಿ ದಿನಚರಿ ಬರೆಯುತ್ತಾಳೆ

ಹುಡುಗಿ ದಿನಚರಿ ಬರೆಯುತ್ತಾಳೆ.
ಸುಂದರ ಹಗಲುಗಳ ಇಂಚಿಂಚನ್ನೂ
ವರ್ಣರಂಜಿತ ಪುಟಗಳಲ್ಲಿ
ಸೆರೆಹಿಡಿಯುತ್ತಾಳೆ.
ನೂರೆಂಟು ಬಾರಿ ಯೋಚಿಸಿದರೂ
ಕರಾಳ ರಾತ್ರಿಯ ಬಗ್ಗೆ ಒಂದೇ ಒಂದು ಸಾಲು
ಬರೆಯಲಾಗದೆ ಮಿಡುಕುತ್ತಾಳೆ.
ಕಪ್ಪೆಲ್ಲವನ್ನೂ ಕಂಗಳಲ್ಲೇ ತುಂಬಿಕೊಂಡು
ಶಬ್ದಗಳಿಗಾಗಿ ತಡಕಾಡುತ್ತಾಳೆ.
ಒಂದು ದಿನ
ಅಪ್ರಕಟಿತ ಭಾವಗಳಡಿ
ಬೆಂದು ಬೂದಿಯಾಗುತ್ತಾಳೆ.
ದಿನಚರಿಯ ವರ್ಣರಂಜಿತ
ಪುಟಗಳನು ತಿರುವಿಹಾಕಿದವರಿಗೆ
ಪ್ರಶ್ನೆಯಾಗಿ ಕಾಡುತ್ತಾಳೆ.
ಪ್ರಶ್ನೆಯಾಗೇ ಉಳಿಯುತ್ತಾಳೆ!

# ನನ್ನ ಕವಿತೆ

೧

ಕವಿತೆ ಹುಟ್ಟುವುದು ಮಹಲಿನಲ್ಲಲ್ಲ,
ಮುರುಕು ಜೋಪಡಿಗಳಲ್ಲಿ.
ಕವಿತೆ ಹುಟ್ಟುವುದು ಝಗಝಗಿಸುವ
ದೀಪಗಳ ಬೆಳಕಿನಲ್ಲಲ್ಲ ಬುಡ್ಡಿ-
ಬೆಳಕಿನ ಮಿಡುಕಿನಲ್ಲಿ.

ಕವಿತೆ ಹುಟ್ಟುವುದು ಕಲ್ಪನೆಯ ಮೂಸೆಯಲ್ಲಲ್ಲ
ದೈನಂದಿನ ಘಟನಾವಳಿಗಳಲ್ಲಿ.
ಕವಿತೆ ಹುಟ್ಟುವುದು ತುಂತುರುಮಳೆಯಲ್ಲಲ್ಲ
ನೊಂದವರ ಕಣ್ಣೀರಿನಲ್ಲಿ.

ಕವಿತೆ ಹುಟ್ಟುವುದು ಬಿಗಿದ ಕೊರಳಿನಲ್ಲಿ,
ನಿರಾಶೆಯ ನೆರಳಿನಲ್ಲಿ, ಅಸಹಾಯಕರ ಆಕ್ರಂದನದಲ್ಲಿ.
ಇವೆಲ್ಲ, ಅಲ್ಲಿ ಇಲ್ಲಿ ಹೆಕ್ಕಿ ಪಟ್ಟಿಮಾಡಿದ
ನುಡಿಮುತ್ತುಗಳು. ಹೋದಲ್ಲೆಲ್ಲ ಹಿಂಬಾಲಿಸಿ
ಕಾಡುವ ಮಾತಿನ ಭೂತಗಳು.

೨

ಆದರೆ ನನ್ನ ಕವಿತೆ, ಹುಟ್ಟಿದ್ದು ಮಹಲಿನಲ್ಲಿ,
ಪಿಳಿಪಿಳಿ ಕಣ್ಣುಬಿಟ್ಟಿದ್ದು ಝಗಝಗಿಸುವ
ದೀಪಗಳ ಬೆಳಕಿನಲ್ಲಿ, ಬೆಳೆದಿದ್ದು ಕಲ್ಪನೆಯ-
ಮೂಸೆಯಲ್ಲಿ, ಅರಳಿದ್ದು ಕನಸಿನಲ್ಲಿ.

ಆದರೂ ಈ ಕವಿತೆಗೆ-
ತುಡಿತ-ಮಿಡಿತಗಳಿಗೆ ಸ್ಪಂದಿಸುವ ಹೃದಯವಿದೆ
ಮನದಲ್ಲಿ ಹೊಸೆದ ಹೊಸ ಕನಸಿದೆ.

ಕಣ್ಣ ಬಿಂಬದಲ್ಲಿ ಕೈ ಕೈ ಬೆಸೆದು ಜೊತೆಯಾಗಿ
ಹೆಜ್ಜೆಯಿಡುವ ಹಂಬಲವಿದೆ.

ಇಷ್ಟಾದರೂ ಹಲವರ ದೃಷ್ಟಿಯಲ್ಲಿ ನನ್ನದು
ಹುಟ್ಟುವುದಕ್ಕೆ ಮುಂಚೆಯೆ ಸತ್ತ ಕವಿತೆ
ಕೆಲವರ ದೃಷ್ಟಿಯಲ್ಲಂತು ಬದುಕಿದರೂ ಸತ್ತ ಕವಿತೆ!

# ಒಳಗೊಂದು ನದಿಯಿದೆ

ನಿನ್ನ
ಒಳಗೊಂದು ನದಿಯಿದೆ
ನನ್ನ ಕಿವಿ ಹೇಳಿದೆ-
ಅದಕ್ಕದರ ಕಲಕಲ ಕೇಳಿಸುತ್ತಿದೆ.

ನಿನ್ನ
ಒಳಗೊಂದು ನದಿಯಿದೆ
ನನ್ನ ನಾಲಗೆ ಹೇಳಿದೆ-
ನದಿಯ ನೀರು ಸಿಹಿಯಾಗಿದೆ.

ನಿನ್ನ
ಒಳಗೊಂದು ನದಿಯಿದೆ
ನನ್ನ ಮೂಗು ಹೇಳಿದೆ-
ನದಿಯೊಳಗೆ ಸುಗಂಧವಿದೆ.

ನಿನ್ನ
ಒಳಗೊಂದು ನದಿಯಿದೆ
ನನ್ನ ಕಣ್ಣು ಹೇಳಿದೆ-
ನದಿಯೊಳಗೆ ಬಣ್ಣವಿದೆ.

ಕಣ್ಣು ಮೂಗು ತುಟಿ ನಾಲಗೆ
ಹೊತ್ತಿಕೊಂಡು ಉರಿಯುತ್ತಿದೆ.
ಬೆಂಕಿ ಹೊತ್ತಿಕೊಂಡು ಉರಿಯುತ್ತಿದೆ.

ಹಾಗಾದರೆ ಒಳಗೊಂದು
ಬೆಂಕಿಯೂ ಇದೆ.

ನಾನು ತಿಳಿದಿದ್ದೆ ಬೆಂಕಿ
ನಾನು ನದಿಯೊಳಗೆ ಮಿಂದು
ನಂದಿ ಹೋಗಿದೆ.

# ಪ್ರೀತಿ ಸತ್ತ ಮನೆಯಲ್ಲಿ

ಗಂಡ
ಹಳೆಯ ಪ್ರೇಯಸಿಯ ನೆನಪುಗಳನ್ನು
ಎದೆಗೊತ್ತಿಕೊಂಡು ಸಂತೈಸುತ್ತಿದ್ದಾನೆ.
ಹೆಂಡತಿ-
ಒಂಟಿ ಬಾವಲಿಯ ರೆಕ್ಕೆ ಬಡಿತಗಳನ್ನು
ಎಣಿಸುತ್ತಿದ್ದಾಳೆ.
ಗೋಡೆಗಳು ಪಿಸುಗುಟ್ಟುತ್ತಿವೆ ಗಂಟಲಲ್ಲಿ
ಪ್ರೀತಿ ಸತ್ತಿದೆ ಮನೆಯಲ್ಲಿ.

ಗಂಡ
ಸವೆದ ಕನಸುಗಳನ್ನು ಗುಡ್ಡೆಹಾಕಿ
ಬೆಂಕಿ ಹಚ್ಚುತ್ತಿದ್ದಾನೆ.
ಹೆಂಡತಿ-
ಮೇಣದ ಬತ್ತಿಗಳಾಗಿ ಉರಿದುಹೋಗಿರಿ
ಎಂದು ತಾರೆಯರನ್ನು ಶಪಿಸುತ್ತಿದ್ದಾಳೆ.
ಗೋಡೆಗಳು  ಪಿಸುಗುಟ್ಟುತ್ತಿವೆ ಗಂಟಲಲ್ಲಿ
ಪ್ರೀತಿ ಸತ್ತಿದೆ ಮನೆಯಲ್ಲಿ.

ಕೆಂಡ ಹೀರುತ್ತಾ ಗಂಡ
ಬಂಡೆಯಾಗುತ್ತಿದ್ದಾನೆ ಒಳಗೆ
ಚಳಿಗಾಳಿಯ ಸೆರಗಲ್ಲಿ ಸುತ್ತಿಕೊಂಡು
ಹೆಪ್ಪುಗಟ್ಟುತ್ತಿದ್ದಾಳೆ ಹೆಂಡತಿ ಹೊರಗೆ.
ಗೋಡೆಗಳು ಪಿಸುಗುಟ್ಟುತ್ತಿವೆ ಗಂಟಲಲ್ಲಿ
ಪ್ರೀತಿ ಸತ್ತಿದೆ ಮನೆಯಲ್ಲಿ.
'ಪ್ರೀತಿ' ಎಲ್ಲಾ ಮೆಟ್ಟಿ ಹುಟ್ಟಿತ್ತು.
ನೀಟಾದ ಕಣ್ಣು, ಮೂಗು, ತುಟಿ
ಶಿಲ್ಪದ ಮೈ ಕಟ್ಟು, ಹೊತ್ತಿತ್ತು.

ಕದ ತಟ್ಟಬಹುದೆ ಸಾವು?

ಹಣ್ಣಾಯಿತು ಪ್ರೀತಿ.
ಮಣ್ಣಾಯಿತು ಪ್ರೀತಿ.

ಕತ್ತಲು ಕವನಿಸುವ ಹೊತ್ತಿನಲ್ಲಿ
ಗೋಡೆಗಳು ಬಿಕ್ಕುತ್ತಿವೆ ಮೌನದಲ್ಲಿ
ಪ್ರೀತಿ ಸತ್ತ ಮನೆಯಲ್ಲಿ.

## ನನಗೆ ಗೊತ್ತಿರಲಿಲ್ಲ....

೧

ನಾನು ಪುಟ್ಟ ಹುಡುಗಿಯಾಗಿದ್ದಾಗ
ಆಕಾಶದೊಳಗೆ ಬೆಂಕಿಯಂತಹ
ನೋವಿದೆಯೆಂದು ಗೊತ್ತಿರಲಿಲ್ಲ.
ಮಳೆ ಸೂರ್ಯನ ಕಣ್ಣೀರು
ಎಂದು ಗೊತ್ತಿರಲಿಲ್ಲ.
ಗಡಗಡ ಎಂದು ಭೂಮಿ
ನಡುಗುವುದು ಅವಮಾನದಿಂದ
ಎಂದು ಗೊತ್ತಿರಲಿಲ್ಲ.

ಗೊತ್ತಿದ್ದರೆ......
ಈಡೇರದ ಆಸೆಗಳ ಮೇಲೆ
ಅಷ್ಟೊಂದು ಕಣ್ಣೀರು
ಹರಿಸುತ್ತಿರಲಿಲ್ಲ.

ಐದು ನಯಾಪೈಸೆಗಾಗಿ
ಆಟದ ಬೊಂಬೆಗಾಗಿ
ಬೆಲ್ಲದ ಮಿಠಾಯಿಗಾಗಿ
ಜರಿ ಲಂಗಕ್ಕಾಗಿ
ಅಷ್ಟೊಂದು ಕಣ್ಣೀರು
ಹರಿಸುತ್ತಿರಲಿಲ್ಲ.

೨

ನನ್ನ ಗೆಳತಿಯರಿಗೆ
ಶ್ರೀಮಂತ ರೆಕ್ಕೆಗಳಿದ್ದವು
ಅವರು ಹಾರುತ್ತಿದ್ದರು

ಹದ್ದುಗಳಂತೆ ಎತ್ತರದಲ್ಲಿ.
ನಾನೋ ನಿಲ್ಲುತ್ತಿದ್ದೆ ಒಂಟಿಯಾಗಿ
ಆಟದ ಕುದುರೆ ಸಹ
ಏರಲಾಗದೆ ಖಾಲಿ ಖಾಲಿ.

ನನ್ನ ಗೆಳತಿಯರು ಅದೆಷ್ಟೊ
ಸಂತೋಷದ ಚಿಟ್ಟೆಗಳನ್ನು
ಸೃಷ್ಟಿಸುತ್ತಿದ್ದರು ನನ್ನೆದುರಲ್ಲಿ.
ನಾನು ಗುಬ್ಬಚ್ಚಿಯಾಗಿ
ಅಣಬೆಯಾಗಿ
ಅಪ್ಪಚ್ಚಿಯಾಗಿ ನೆಲದಲ್ಲಿ
ಹೊರಳುತ್ತಿದ್ದೆ ಹತಾಶೆಯಲ್ಲಿ.

ನನಗೂ ಜೊತೆಗಾರರಿದ್ದರು.
ಮಾತಾಡದ ರೈಲು ಹಳಿಗಳು
ಪುಟಿಯುವ ಹೊಂಡದ
ಮೀನುಗಳು
ಹುರಿದ ಹುಣಿಸೆಬೀಜಗಳು
ಚೌಕ-ಭಾರಗಳು.

ನನಗೆ ಎಷ್ಟೊ ಸಲ
ಅನಿಸುತ್ತಿತ್ತು
ಇಡಿ ಪ್ರಪಂಚವೆ
ನಗುವನ್ನು ನನ್ನ ಮುಖದ
ಮೇಲೆ ಉಗುಳಿದ ಹಾಗೆ
ಆಗೆಲ್ಲ ನಾನು ಮುಖಮುಚ್ಚಿಕೊಂಡು
ಇಳಿಯುತ್ತಿದ್ದೆ ನನ್ನೊಳಗೆ.
೩
ಈಗ ನಾನು ದೊಡ್ಡವಳಾಗಿದ್ದೇನೆ.
ತಾರೆಯರನ್ನು ಕಿತ್ತು

ಮಡಿಲಿಗೆ ಹಾಕಿಕೊಳ್ಳುವಷ್ಟು
ಎತ್ತರ ಬೆಳೆದಿದ್ದೇನೆ.
ಒಂಟಿಯಾಗಿ ಸುತ್ತುತ್ತಿರುವ
ಹದ್ದುಗಳೀಗ ನೋಡುತ್ತಿವೆ.
ನನ್ನನ್ನು
ಸುಮ್ಮನೆ ನೋಡುತ್ತಿವೆ.

# ನಾನು ಸೂರ್ಯ

ಎಲ್ಲ ಹೇಳುತ್ತಾರೆ ನಾನು
ಹಕ್ಕಿಗಳ ಗಡಿಯಾರ
ನನಗೊ...
ಚಿಲಿಪಿಲಿ ಸದ್ದು
ಕುಲುಕಿ ಎಬ್ಬಿಸಿದಾಗಲೆ
ಎಚ್ಚರ!

ನಾನು ಬಂಗಾರದ ರಥದ
ಒಡೆಯ ಎನ್ನುವುದು
ಕೇವಲ ಉಳ್ಳವರ ಕುಹಕ
ನಾನೂ ನಿಮ್ಮಂತೆಯೆ
ಬೆಂಕಿಯ ಕಾರ್ಖಾನೆಯಲ್ಲಿ
ಬಡ ಕಾರ್ಮಿಕ

ನಾನು ಅಸ್ಪೃಶ್ಯ
ನನ್ನ ಜೊತೆಗೆ ಎದ್ದು
ಧೂಳು ಗುಡಿಸುವ
ಜಾಡಮಾಲಿಯನ್ನು
ಬೆಚ್ಚಗೆ ಚುಂಬಿಸುತ್ತೇನೆ
ನಂತರ ಮಿಕ್ಕವರನ್ನು
ಸುಡುತ್ತಾ ಹೋಗುತ್ತೇನೆ.

ನಾನು ಹುಟ್ಟು ಬಂಡಾಯಗಾರ
ಜಗತ್ತಿನ ಅನ್ಯಾಯದ
ವಿರುದ್ದ ಯಾವತ್ತು

ಸಿಡಿದು ನಿಂತಿದ್ದೇನೆ ದೂರ
ನಾನು ಕವಿ
ಹಳ್ಳಗಳು ನನ್ನ
ಹನಿಗವನಗಳು
ನದಿಗಳು ನನ್ನ
ದೀರ್ಘ ಕವನಗಳು
ಸಾಗರಗಳು ನನ್ನ
ಮಹಾಕಾವ್ಯಗಳು.

ನಾನು ಕಲಾವಿದ
ನನ್ನ ಸಂಜೆ
ಇಡಿ ಜಗತ್ತಿನಲ್ಲೆ
ಮಾನ್ಯತೆ ಪಡೆದ
ಉತ್ಕೃಷ್ಟ ಕಲಾಕೃತಿ

ನಾನು ಕಾವಿ ಉಡುತ್ತೇನೆ
ಸಂನ್ಯಾಸಿಯಲ್ಲ
ನಾನು ಬೆಳಕು ಕೊಡುತ್ತೇನೆ
ಜ್ಞಾನಿಯಲ್ಲ
ನಾನು ಸೂರ್ಯ-
ನಾನು ವಸ್ತು
ನಾನು ಚೈತನ್ಯ.

# ಹುಡುಗಿ ಮತ್ತು ದಾಸವಾಳ

ಟೀಚರ್....
ಅವತ್ತು ನಾನು ತಂದು
ಕೊಟ್ಟ ಹೂವನ್ನು
ನೀವು ಮುಡಿಯಲಿಲ್ಲ.

ನಿಮ್ಮ ಕುಂಕುಮದ ಬೊಟ್ಟಿಗೆ
ನಿಮ್ಮ ಎತ್ತರದ ತುರುಬಿಗೆ
ತೊಟ್ಟುಸಹಿತ ಕಿತ್ತುತಂದ
ಕೆಂಪು ದಾಸವಾಳವನ್ನು
ನೀವು ಮುಡಿಯಲಿಲ್ಲ.

ನಾನು ನಿಮ್ಮನ್ನು ಪ್ರೀತಿಸಿದ್ದೆ
ನಮಗಾಗಿ ನೀವು ಪಾಠ ಹೇಳುವ
ಗಣಿತವನ್ನೂ ಪ್ರೀತಿಸಿದ್ದೆ
ಆದರೂ ನೀವು ಹೂವು ಮುಡಿಯಲಿಲ್ಲ.

ಮರುದಿನ ನೀವೆ ಬೋರ್ಡಿನ
ಮೇಲೆ ಕೆಂಪು ದಾಸವಾಳ ಬರೆದಿರಿ
ಆಮೇಲೆ ಪರಾಗ ಕೇಸರ
ಎಂದು ಗಂಟೆಗಟ್ಟಳೆ ಕೊರೆದಿರಿ
ನನ್ನ ಕಣ್ಣಿಂದ ಅಷ್ಟೂ
ದಳಗಳುರುಳಿದವು
ನಿಮಗೆ ಕಾಣಲಿಲ್ಲ.

ನಾನು ನೋಡಿದ್ದೇನೆ
ನನ್ನ ಗೆಳತಿಯರು ತರುವ

ಗುಲಾಬಿಯನ್ನು ನಿಮ್ಮ ಮುಡಿಯಲ್ಲಿ
ಆದರೆ ಗಟ್ಟಿಮಣ್ಣಿನ
ನನ್ನ ಮನೆಯಂಗಳದಲ್ಲಿ
ಗುಲಾಬಿ ಚಿಗುರುವುದಿಲ್ಲ.

ನೀವೇ ನನ್ನೆದೆಯೊಳಗೆ
ಬೇರಿಳಿಸಿದ ಪ್ರೀತಿಯ ಗಿಡದಲ್ಲಿ
ನೂರು ದಾಸವಾಳದ ಹೂಗಳರಳಿದರೂ
ಟೊಂಗೆ ಟೊಂಗೆಯಲಿ
ಒಂದೂ ನಿಮ್ಮ ಮುಡಿಗೇರಲಿಲ್ಲ.

## ಯಾಕೆ ?

ಈಗೀಗ ಒಂದೇ ಯೋಚನೆ
ನನ್ನೊಳಗೆ.
ಬದಲಾದ ಸಂತೋಷಗಳಲ್ಲಿ
ಬದಲಾದ ನೋವುಗಳಲ್ಲಿ
ನಾನೂ ಬದಲಾಗಿದ್ದೇನೆಯೆ?

ನನ್ನ ಪ್ರೀತಿಯ ಬಗ್ಗೆಯೆ
ಗಾಢ ಅನುಮಾನ
ನಿನ್ನ ಕಣ್ಣೊಳಗಿನ ದುಃಖ
ಗೆಲ್ಲಲಾಗಿಲ್ಲ ಯಾಕೆ?

ಬಣ್ಣದ ಹಾಗೆ
ಬೆಳಕಿನ ಹಾಗೆ
ನುಣುಚಿ ಹೋಗುತ್ತಿದ್ದೀಯೆ
ಯಾಕೆ? ಯಾಕೆ?

ನೀನು ಕೇವಲ
ಹಸಿ-ಬಿಸಿ ರಕ್ತಮಾಂಸದ
ಮುದ್ದೆಯಾಗಿದ್ದಿದ್ದರೆ
ಎಂದೋ ಹೋಗುತ್ತಿದ್ದೆ
ಹಿಂದಿರುಗಿ ನೋಡದೆ

ಆದರೆ ನೀನು
ಪರಿಮಳಿಸುವ ಗಾಳಿಯಾಗಿ
ಇರುವೆ, ಮೊರೆಯುತ್ತಿರುವೆ
ನನ್ನೊಳಗೆ.

ಕೊನೆಗೆ-
ನೀನು ಪ್ರೀತಿಯ ದಂಡೆಯಾಗಿದ್ದರೆ
ನಾನು ನಡೆದು ಬರುತ್ತಿದ್ದೆ
ಆದರದು ಮಹಾಪೂರ
ಕಾಲಡಿಯ ಮಣ್ಣು ಕುಸಿಯುತ್ತಿದೆ
ಕೊಚ್ಚಿ ಹೋಗುತ್ತಿದ್ದೇನೆ.

# ಚಂದ್ರನನ್ನು ಕರೆಯಿರಿ ಭೂಮಿಗೆ (೧೯೯೧)

ಬಿದರಹಳ್ಳಿ ನರಸಿಂಹಮೂರ್ತಿ,ಧಾರಿಣಿ
ಎಂ.ಚಂದ್ರಶೇಖರಯ್ಯ,ರೇಣುಕಾ
ನಿಸಾರ್‌ಅಹಮದ್,ಮನೋರಮಾ
ದಂಪತಿಗಳಿಗೆ
ಪ್ರೀತಿಯಿಂದ

# ಪ್ರೇಮ ಮತ್ತು ದುಃಖ

ಬಣ್ಣದ ಸಂಜೆಯನ್ನು
ನೋಡುತ್ತಾ ನಿಂತಿದ್ದೆ-
ನೋಡುತ್ತಿರುವಂತೆಯೆ
ಸಿಡಿಲ ಚೂರೊಂದು
ಉರಿದು ಕಪ್ಪಾಯಿತು.

ಮೊರೆಯುವ ಕಡಲನ್ನು
ನೋಡುತ್ತಾ ನಿಂತಿದ್ದೆ-
ನೋಡುತ್ತಿರುವಂತೆಯೆ
ತತ್ತರಿಸುವ ಅಲೆಯೊಂದು
ಎತ್ತರಕೆ ನೆಗೆದು ಕೆಳಗೆ ಬಿತ್ತು.

ಹೆಮ್ಮರವೊಂದನ್ನು
ನೋಡುತ್ತಾ ನಿಂತಿದ್ದೆ-
ನೋಡುತ್ತಿರುವಂತೆಯೆ
ಒಂದರ ಹಿಂದೊಂದು
ಎಲೆ ಉದುರಿ ಬೋಳಾಯಿತು.

ಹಸಿ ಮಣ್ಣಿನ ಮೇಲೆ
ನಡೆದು ಹೋಗುತ್ತಿದ್ದೆ-
ಹೋಗುತ್ತಿರುವಂತೆಯೆ
ಮುಳ್ಳೊಂದು ಚುಚ್ಚಿ
ತಡೆದು ನಿಲ್ಲಿಸಿತು.

ಇಡಿಯಾಗಿ ಸೂರ್ಯನಿಗೆ
ಮೈಯೊಡ್ಡಿ ನಿಂತಿದ್ದೆ-
ನೋಡುತ್ತಿರುವಂತೆಯೆ

ಮೂಗಿನ ಮೇಲೊಂದು
ಹನಿ ಉರುಳಿ ಒದ್ದೆಯಾಯಿತು.

ಬಣ್ಣದ ಸಂಜೆ
ಉಕ್ಕುವ ಕಡಲು
ಉರಿಯುವ ಸೂರ್ಯ
ಮಣ್ಣು, ಮರ ಎಲ್ಲಾ
ಕಣ್ಣೊಳಗೆ ಹೊತು
ಯೌವನ ಮಾತಾಡಿತು
ಪ್ರೇಮವೆಂದು ಕರೆಯಿತು.

೨

ಆಕಾಶವ ಸೀಳಿದ ಸಿಡಿಲು
ನೆಲಕಚ್ಚಿದ ಅಲೆ, ಎಲೆ
ಚುಚ್ಚಿ ನಿಲ್ಲಿಸಿದ ಮುಳ್ಳು
ಸಿಳ್ಳು ಹೊಡೆದು ಹಣೆಯ ಮೇಲೆ
ಬೆವರ ಪೋಣಿಸಿತು.

ಸೂರ್ಯ, ಕಡಲು, ಸಂಜೆ,
ಮರ, ಮಣ್ಣು ಎಲ್ಲಾ
ಕಣ್ಣೊಳಗೇ ಹಣ್ಣಾಯಿತು
ಮುಪ್ಪು ಅದನ್ನು
ದುಃಖವೆಂದು ಬರೆಯಿತು.

# ಹಸಿವು

ಮುತ್ತಿನ ಹನಿಗಳನ್ನು
ಕೆಂಡದ ತುಟಿ ಹೀರಿತು.

ಮುಗುಳು ನಕ್ಕ ಚಿಗುರನ್ನು
ನೆಲ ನಿಷ್ಕರುಣೆಯಿಂದ ನುಂಗಿತು.

ಹಸಿದ ಒಡಲು ಬಾದಾಮಿ
ಕಣ್ಣುಗಳನ್ನೂ ಬಿಡಲಿಲ್ಲ.

ಒಂದು ಹಿಡಿ ಮೆದುಳು
ಜಗತ್ತಿನ ನಾಡಿಯಾದ
ನೀರು, ನೆಲ, ಆಕಾಶ
ಕೊನೆಗೆ-
ಪ್ರೇಮವನ್ನೂ ಧೂಳಾಗಿಸಿತು.

ತಾಯಿಯ ವಾತ್ಸಲ್ಯಪೂರಿತ
ಕಣ್ಣುಳ್ಳ ಸೂರ್ಯನನ್ನೇ ಕೇಳಿದೆ-
ನಿನಗೇನಾದರೂ ಹೇಳುವುದಿದೆಯೇ?

ಅವನು ಸುಮ್ಮನೆ
ಉರಿಯತೊಡಗಿದ.

# ಕವಿಗೋಷ್ಠಿಯಲ್ಲಿ.......

ಢಣಢಣ ಗಂಟೆ ಬಾರಿಸಿತು
ಎಲ್ಲರೂ ಸಾಲಾಗಿ ಕುಳಿತರು
ಬಣ್ಣ ಬಣ್ಣದ ಕವಿತೆಗಳು
ಒಂದೊಂದಾಗಿ ವೇದಿಕೆಗೆ ಬಂದವು.

ಕೆಲವು ಕವಿತೆಗಳು
ಹೂಗಳಂತೆ ಅರಳಿದರೆ
ಮತ್ತೆ ಕೆಲವು
ನದಿಗಳಂತೆ ಹರಿದವು.

ಕೆಲವು ಕವಿತೆಗಳು
ನಕ್ಷತ್ರಗಳಂತೆ ಮಿನುಗಿದರೆ
ಮತ್ತೆ ಕೆಲವು
ಉಲ್ಕೆಗಳಂತೆ ಉರಿದು
ಬೂದಿಯಾದವು.

ಕೆಲವು ಕವಿತೆಗಳು
ಕಲ್ಲುಸಕ್ಕರೆ ತಿನ್ನಿಸಿದರೆ
ಮತ್ತೆ ಕೆಲವು
ಕಷಾಯ ಕುಡಿಸಿದವು.

ಕೆಲವು ಕವಿತೆಗಳು
ಬೆಂಕಿ ಉಗುಳಿದರೆ
ಮತ್ತೆ ಕೆಲವು
ರಕ್ತ ಕಾರಿದವು.
ಕೆಲವು ಕವಿತೆಗಳು
ಬಿಕ್ಕಳಿಸಿ ಅತ್ತರೆ

ಮತ್ತೆ ಕೆಲವು
ಮುಕ್ಕಳಿಸಿ ನಕ್ಕವು

ಕೆಲವು ಕವಿತೆಗಳು
ತೊಂಡು ದನಗಳಂತೆ
ಕಂಡದ್ದನ್ನೆಲ್ಲ ಹೊಸಕಿಹಾಕಿದರೆ
ಮತ್ತೆ ಕೆಲವು ತಾಯಿಯಂತೆ
ಅವನ್ನೆತ್ತಿಕೊಂಡು ಸಂತೈಸಿದವು.

ಕೊನೆಗೆ ಬಂದದ್ದು
ಪ್ರೇಮಿಯಂತಹ ಕವಿತೆ
ನೆಲ ನೀರು ಆಕಾಶದಂತ ಕವಿತೆ
ಅದು ಕಡಲಿನ ಹಾಗೆ ಮೊರೆಯುತ್ತಿತ್ತು
ನೆಲದ ಹಾಗೆ ಪರಿಮಳಿಸುತ್ತಿತ್ತು.
ಅದು ಆಕಾಶದಂತೆ
ಎಲ್ಲವನ್ನೂ ತಬ್ಬಿಕೊಂಡು
ಮೈ ಮರೆಯಿತು, ಮೈ ಮರೆಸಿತು.

(ಕವಿಗೋಷ್ಠಿಯೊಂದರಲ್ಲಿ ಕೆ. ಎಸ್. ನರಸಿಂಹಸ್ವಾಮಿಯವರ ಕವಿತೆಯನ್ನು ಕೇಳಿ)

# ..... ಹೋಗಿ ಬಿಡು

ನೋಡು-
ಕಣ್ಣು ತುಟಿ ಮೂಗು
ಕೈಯಿ ಮೈಯಿ
ಏನಿಲ್ಲದಿದ್ದರೂ
ಇದ್ದ ಹಾಗೆಯೇ ಕಾಣಿಸುವ
ಚಂದ್ರನನ್ನು ಕಡೆಯ ಬಾರಿ
ಎಂಬಂತೆ ನೋಡಿ ಬಿಡು.

ಬೆಂಕಿಯನ್ನು ಬೆಳಕನ್ನು
ಬಣ್ಣವನ್ನು ಬೆಡಗನ್ನು
ತುಂಬಿಕೊಂಡಿರುವ,
ನಿನ್ನೊಳಗೆ
ಬೆರಗನ್ನು ಭಯವನ್ನು
ಹುಟ್ಟಿಸಿದ
ಆಕಾಶವನ್ನು ಕಡೆಯ ಬಾರಿ
ಎಂಬಂತೆ ನೋಡಿ ಬಿಡು.

ನೀನು ಆಟವಾಡಿದ ನೆಲ
ನಿನಗೆ ಪಾಠ ಕಲಿಸಿದ ಹೊಲ
ನಿನ್ನಲ್ಲಿ ಪ್ರೀತಿ ಹುಟ್ಟಿಸಿದ ಹುಡುಗ
ನಿನಗೆ ನೀತಿ ಬೋಧಿಸಿದ ತಂದೆ
ಎಲ್ಲರನ್ನೂ ಕಡೆಯ ಬಾರಿ
ಎಂಬಂತೆ ನೋಡಿ ಬಿಡು.

ಹೋಗು-
ಹುಲ್ಲು ಪೊದೆ ಮರಗಿಡಗಳಲ್ಲಿ
ಹುದುಗಿರುವ

ಹೂವುಗಳನ್ನು ಅರಳಿಸು
ಹಾಡುಗಳನ್ನು ಎಬ್ಬಿಸು.

ನಿನ್ನ ಅಹಂಕಾರವನ್ನು
ನಿನ್ನ ಪ್ರೀತಿಯನ್ನು
ನಿನ್ನ ದುಃಖವನ್ನು
ಇಲ್ಲೆ ಈ ದಡದಲ್ಲಿರಿಸಿ
ತಣ್ಣಗೆ, ಕಡಲಿನೊಳಗೆ
ನದಿಯ ಹಾಗೆ
ನಡೆದು ಹೋಗಿಬಿಡು.......

# ರಸ್ತೆ ಹೋಗುವುದೆಲ್ಲಿಗೆ ?

ಬೂದು ಬಣ್ಣದ ಚಳಿಗೆ
ಮುಂಜಾವದ ತುಟಿಯೊಡೆದಿದೆ
ಆಕಾಶ ಚಂದಿರನನ್ನು
ಹಣೆಯಲ್ಲಿ ಧರಿಸಿ ನಸುನಗುತಿದೆ
ಮಿಲ್ಲುಗಳಿಂದ ಹೊಗೆಯನ್ನೂ
ಹುಣ್ಣುಗಳನ್ನೂ
ಬಳುವಳಿಯಾಗಿ ಪಡೆದಿರುವ ಭದ್ರೆ
ಮುದಿಸೂಳೆಯ ಹಾಗೆ ನಡುಗುತ್ತಿದ್ದಾಳೆ
ಜಿಪುಣಶೆಟ್ಟಿ ಸೂರ್ಯನದು
ತೂಕದ ವ್ಯವಹಾರ
ಒಂದೊಂದೆ ಕಿರಣ ಚೆಲ್ಲುತ್ತಿದ್ದಾನೆ
ನೆಲದ ಕೊರಳಿಗೆ ಹಾರ.

ಅಂದವಾಗಿ ಅಲಂಕರಿಸಿಕೊಂಡು
ಅಚ್ಚುಕಟ್ಟಾಗಿ ಕುಳಿತುಕೊಂಡಿರುವ
ಹಾಲಿನ ಬಾಟಲಿಗಳಿಗೆ
ಮೈತುಂಬಾ ನಿರೀಕ್ಷೆ
ಯಾರೋ ಮಡಿವಂತರು
ಸಾರಿಸಿ ಗುಡಿಸಿದ ಅಂಗಳ
ಗುಬ್ಬಚ್ಚಿಗಳಿಗೆ ರಂಗಸಜ್ಜಿಕೆ.

ಕೈಗಾಡಿಯ ಬೈಟೂ ಕಾಫಿಯಲ್ಲಿ
ಬೋನಸ್ಸು ಮುಷ್ಕರ ಹಬೆಯಾಡುತ್ತಿದೆ
ದೂರದ ಚರ್ಚಿನ ಗಂಟೆ
ಎಂಟು ಹೊಡೆದಿದೆ.
ಪುಸ್ತಕದ ಬೆಟ್ಟ ಹೊತ್ತ
ಪುಟಾಣಿಗಳಿಂದ ಪ್ರಾರ್ಥನಾಗೀತೆ

ಕಾಡಿನ ಕಡವೆಯ ಮರಿಗಳು
ಊರ ಉದ್ಯಾನವನದ
ಕಬ್ಬಿಣದ ಕಂಬಗಳಿಗೆ
ಹತಾಶೆಯಿಂದ ಕೊರಳು ಉಜ್ಜುತ್ತಿವೆ
ಬತ್ತಲಾದ ಪುಟ್ಟ ಗಿಡಗಳು
ವನಮಹೋತ್ಸವದ ದಿನ ಎಣಿಸುತ್ತಿವೆ.

ಚಪ್ಪಲಿ, ಚೀಲ, ಕೊಡೆ
ಚದುರಿ ಚೆಲ್ಲಾಪಿಲ್ಲಿಯಾಗಿವೆ.
ವರದಕ್ಷಿಣೆ ತರದ ಹುಡುಗಿಯ ಹಾಗೆ
ಇಡಿಯಾಗಿ ಮೈಸುಟ್ಟುಕೊಂಡಿರುವ
ಕಾರು ಮುಖ ಮಾತ್ರ ಉಳಿಸಿಕೊಂಡಿದೆ.
ಕೈಗಾಡಿಗೆ ಕಾಲಿಲ್ಲ
ಶನಿದೇವರ ರಥ ಕಾಣೆಯಾಗಿದೆ.
ಚುರುಮುರಿ ಉಂಡೆಯನ್ನು
ಸುತ್ತಿರುವ ಮಾಸಲು ಹಾಳೆಯಲ್ಲಿ
ಉಲ್ಲಾಸಭರಿತ ಕವಿತೆ.

ಒಂದಿಷ್ಟು ಕದನ-ಕುತೂಹಲ
ಆಮೇಲೆ-
ಲಾಠಿ ಬೂಟುಗಳ ಟಪ ಟಪ
ಸದ್ದಿನ ಹಿನ್ನಲೆಯಲ್ಲಿ
ಟೋಪಿಗಳ ಶಾಂತಿಸಭೆ.

ಭಜನೆ, ತಾಳ, ಬೆಂಕಿ
ಸಣ್ಣಗೆ ಉಸಿರು ಕಟ್ಟಿಸುವ ಹೊಗೆ .
ಯಾರದ್ದೋ......
ಕೊನೆಯ ಮೆರವಣಿಗೆ.
ಸೀಳಿಹೋದ ಅಭಯಹಸ್ತದ ಮಗ್ಗುಲಲ್ಲಿ
ಚಿಂದಿಚಿಂದಿಯಾದ

ನೇಗಿಲು ಹೊತ್ತ ರೈತನ ಚಿತ್ರ:

ಕಣ್ಣರಳಿಸಿ ನೋಡುತ್ತಿದ್ದಾನೆ
ಹಸಿರು ರುಮಾಲಿನ ಹುಡುಗ
ಮಾರ್ಕ್ಸ್, ಬುದ್ಧ, ಗಾಂಧಿ
ಚಿಂತನೆಯಲ್ಲಿ ಗಡ್ಡ ಹಣ್ಣಾಗುತ್ತಿದೆ
ಮೈಮರೆತು ನಿಂತಿದ್ದಾನೆ ಹುಡುಗ!

ಗಾಳಿಯೊಳಗೆ ತೇಲಿದಂತೆ
ಚೆಲುವಾಗಿ ಹೂವಿನ ಹಾಗೆ
ಪರಿಮಳಿಸುತ್ತ ನಡೆದು ಬರುತ್ತಿದ್ದಾಳೆ
ಸೇಬು ಕೆನ್ನೆಯ ಹುಡುಗಿ
ಉತ್ಸವದ ಮೂರುತಿಯ ಹಾಗೆ ಶಿಸ್ತಾಗಿ
ಉತ್ಸಾಹ ಉಕ್ಕುಕ್ಕಿ ಚೆಲ್ಲುವ ಹಾಗೆ
ಹರಿದು ಬರುತ್ತಿದ್ದಾಳೆ ಹುಡುಗಿ
ಮೊಟ್ಟ ಮೊದಲ ಹೆಜ್ಜೆ ಇಟ್ಟ
ಮಗುವಿನ ಸಂಭ್ರಮದಲ್ಲಿ
ಅವರಿವರನ್ನು ಕೇಳುತ್ತಿದ್ದಾಳೆ.....
ಈ ರಸ್ತೆ ಹೋಗುವುದೆಲ್ಲಿಗೆ?

# ಮೃತ್ಯು

ಪ್ರತಿದಿನ , ಪ್ರತಿಕ್ಷಣ
ಅದೇ ಕೆಲಸ:
ಹುಟ್ಟಿನ ಮನೆಗೆ
ಭೇಟಿ ಕೊಡುವುದು,
ಸಂಭ್ರಮದ ತುಣುಕನ್ನು
ಮೆದ್ದು, ತನ್ನದೊಂದು
ಬೀಜ ನೆಟ್ಟು, ಗುಟ್ಟಾಗಿ
ಓಡಿಬರುವುದು.
ಮತ್ತೆ ಅದೇ ಕೆಲಸ
ಕಾಯುವುದು
ನೆಟ್ಟ ಬೀಜ ಫಲಕೊಟ್ಟು
ಹಣ್ಣಾಗಿ ಕಳಚಿಕೊಳ್ಳುವುದನ್ನೇ
ಕಣ್ಣಾಗಿ ಕಾಯುವುದು.

ಮತ್ತೆ ಅದೇ ಕೆಲಸ
ಆಯುವುದು
ಕವಡೆ ಕಣ್ಣುಗಳನ್ನು
ನಾರುವ ಹುಣ್ಣುಗಳನ್ನು
ತಲೆಬುರುಡೆ, ಎದೆಗೂಡು
ಅಳಿದುಳಿದ ಹಾಡುಗಳನ್ನೂ
ಆಯುವುದು.

ನಿತ್ಯದ ಕೆಲಸದ ಮಧ್ಯೆ
ತುರ್ತಿನ ಕರೆ ಬಂದಲ್ಲಿ .....
ಓಡಬೇಕು ಬಿರುಗಾಳಿಯಾಗಿ,
ಇಲ್ಲ ಯಾವುದಾದರೊಂದು
ನದಿಯೊಳಗೆ ಅವಿತು

ಉಕ್ಕಬೇಕು ಪ್ರವಾಹವಾಗಿ
ಅಥವ ಉಲ್ಕೆಯಾಗಿ
ಉರಿದು ಕಲ್ಲುಗಳ
ಮಳೆಗರೆಯಬೇಕು.

ಒಮ್ಮೊಮ್ಮೆ ಅನಿಸುತ್ತೆ
ಎಲ್ಲ ಮರೆತು
ಎಲ್ಲಾದರೊಂದು ಕಡೆ
ದೂರ ಒಂಟಿಯಾಗಿ
ಮರುಭೂಮಿಯ ಹಾಗೆ
ನಿಂತು ಬಿಡಬೇಕೆಂದು.

## ಏಳು ಪುಟ್ಟ ಪದ್ಯಗಳು

### ೧.ಎಷ್ಟೊಂದು ಗುಟ್ಟುಗಳು

ಖಾಲಿ ಆಕಾಶ
ಕತ್ತರಿಸುವ ಮೌನ
ಒಂಟಿಯಾಗಿ ಸುತ್ತುವ
ಹದ್ದನ್ನು ನೋಡಿ
ಅಯ್ಯೋ ಅಂದೆ.

ಖಾಲಿ ಬಯಲು
ಕತ್ತರಿಸುವ ಮೌನ
ಅದೆ ಹದ್ದು ಒಬ್ಬಂಟಿ
ಕುಳಿತು ಇಡೀ ಬೇಟೆಯ
ಕಬಳಿಸುವುದ ಕಂಡೆ.

ಹೌದು
ಎಷ್ಟೊಂದು ಗುಟ್ಟುಗಳು
ಒಂಟಿತನದ ಹಿಂದೆ....

### ೨.ಅವೊತ್ತು....

ಬಾಲ್ಯದಲ್ಲಿ ನಾನು
ಯಾವಾಗಲೂ ಸುಳ್ಳಿನ
ಮಿಠಾಯಿ ಮೆಲ್ಲುತ್ತಿದ್ದೆ.

ಲಾಭ- ನಷ್ಟದ ಪರಿವೆಯಿಲ್ಲದೆ
ಸುಳ್ಳಿನ ಮೊಗ್ಗುಗಳನ್ನು
ಪೋಣಿಸಿ ಮಾಡುತ್ತಿದ್ದೆ.

ಈಗನಿಸುತ್ತದೆ
ಅವೊತ್ತಿನ ಪ್ರತಿಯೊಂದು
ಸುಳ್ಳಿನಲ್ಲೂ ಮುಗ್ಧ ಹಂಬಲವಿತ್ತು
ಕಲ್ಪನೆಯ ಅಪ್ರತಿಮ
ಸೌಂದರ್ಯವಿತ್ತು.

೩. ಅದೇ ಕೊನೆ

ನಾನು ಪ್ರೀತಿಸಿದ್ದು ನನ್ನನ್ನೆ
ನನ್ನ ಅಹಂಕಾರವನ್ನು
ನನ್ನ ದುಃಖವನ್ನು
ನನ್ನ ಕೆಟ್ಟತನವನ್ನು
ಅದಮ್ಯವಾಗಿ ಪ್ರೀತಿಸಿದ್ದು ನಾನೆ.

ಪ್ರೀತಿ ಬಟ್ಟಲು
ತುಂಬುವ ಮೊದಲೆ
ಆಸೆ ಬುರುಕಿಯಂತೆ
ಕುಡಿಯುತ್ತಿದ್ದವಳು ನಾನೆ.

ಒಮ್ಮೆ ಮಾತ್ರ ನನಗೆ
ಗೊತ್ತಿಲ್ಲದ ಹಾಗೆ
ಬಟ್ಟಲು ತುಂಬಿ ತುಳುಕಿ
ಚೆಲ್ಲಿತು ನಿನ್ನ ಮೇಲೆ
ಅದೇ ಕೊನೆ-

ಆಮೇಲೆ ಪ್ರೀತಿಸಿದ್ದು ನಿನ್ನನ್ನೆ.

೪. ಹೊಂಚು

ಪ್ರೀತಿಪಾತ್ರರು ಸತ್ತಾಗೆಲ್ಲ
ನನ್ನೊಳಗಿನ ಚೈತನ್ಯದ
ಕಣವೊಂದು ಸುಟ್ಟು ಬೂದಿಯಾಗುತ್ತದೆ.

ನನ್ನವನು ಮೈಮರೆತು
ಮಲಗಿದ್ದರೂ
ಕಳವಳಿಸುತ್ತಾ
ಎದೆಬಡಿತ ಆಲಿಸುತ್ತೇನೆ.
ನನಗನ್ನಿಸುತ್ತದೆ
ಯಾರೋ ಹೊಂಚು
ಹಾಕುತ್ತಿದ್ದಾರೆ ಬೆನ್ನಹಿಂದೆ.

೫. ಎಳೆದು ತಾ ನನ್ನನ್ನು

ಎಲ್ಲಕ್ಕಿಂತ ಮೊದಲು
ನನ್ನ ವಿಷದ ಹಲ್ಲುಗಳನ್ನು
ಕಿತ್ತುಬಿಡು.

ನನ್ನ ಸಣ್ಣತನದ ರೆಕ್ಕೆ
ಆಕಾಶವನ್ನೆ ಗುಡಿಸುವಂತಿದ್ದರೆ
ಅದನ್ನು ಕತ್ತರಿಸಿಬಿಡು.
ದುರಹಂಕಾರದ ಮೀನು
ಎಂದೆಣಿಸುವಿಯಾದರೆ
ದಡಕ್ಕೆ ತಂದು ಬಿಸಾಡು.
ನನಗೂ ಸಾಕಾಗಿದೆ
ಈ ಯುದ್ಧ ಒಳಗೆ-ಹೊರಗೆ

ಎಳೆದು ತಾ ನನ್ನನ್ನು
ನಿರ್ಮಲ ಬದುಕಿಗೆ.

೬. ಮತ್ತೆ ಬೆಳಗಾಗಿದೆ

ಮತ್ತೆ ಬೆಳಗಾಗಿದೆ
ಬೆಳಕಿನ ಸಮುದ್ರದಲ್ಲಿ
ಜಗತ್ತು ಮುಖ

ತೊಳೆದುಕೊಳ್ಳುತ್ತಿದೆ.
ಸೂರ್ಯ ಮೈಮುರಿಯುತ್ತಿದ್ದಾನೆ.

ಪೇಪರು ಕೊಡುವ
ಪುಟ್ಟ ಹುಡುಗನಿಗೆ
ಕರೆಗಂಟೆ ಎಟುಕುತ್ತಿಲ್ಲ

ಹಾಲು ಕೊಡುವ ಮುದುಕ
ಸಾವಿನ ಸುಖದಲಿ
ಮೈಮರೆತಿರುವ
ಹೆಂಗಸರನ್ನು ಬದುಕಿನ
ಬಾಗಿಲಿಗೆ ಎಳೆಯುತ್ತಿದ್ದಾನೆ .....

**೭. ಕಟ್ಟಕಡೆಗೆ ಪ್ರೀತಿ .....**

ನಿನ್ನ 'ಪ್ರೀತಿಗೆ', ನನ್ನೊಳಗೆ
ಬರಬಾರದೆ ? ಅಂದೆ.
ಅಂದದ್ದೆ ತಡ,

ನಿನ್ನ ದುಃಖ ಮಂಜಾಗಿ
ನನ್ನ ಕಾಲು ಕೊರೆಯಿತು.
ನಿನ್ನೊಳಗಿನ ಕಹಿ
ಹದ್ದಾಗಿ ನನ್ನ ಕುಕ್ಕಿತು
ನಿನ್ನ ಒರಟುತನದ ಇರುವೆ
ಕಂಡಲ್ಲೆಲ್ಲಾ ಕಚ್ಚಿತು-

ಕಟ್ಟಕಡೆಗೆ 'ಪ್ರೀತಿ'
ಒಳಗೆ ಬಂದೆ ಅಂತು.

# ಗಾಯಗಳು

ನಿನ್ನೆಯ ದಿನ ಮೈಯೆಲ್ಲವನ್ನು
ಗೀರಿಕೊಂಡಿದ್ದವು ಗಾಯಗಳು
ನಿನ್ನೆಯ ದಿನ ಮನಸೆಲ್ಲವನ್ನೂ
ಹೀರಿಕೊಂಡಿದ್ದವು ಗಾಯಗಳು

ನಾನು ಅವುಗಳಿಗೆ ಪರಿಪರಿಯಾಗಿ
ತಿಳಿಯ ಹೇಳಿದೆ
ಪ್ರೀತಿಯ ಮಾತಿಂದ
ಸಂತೈಸಲು ನೋಡಿದೆ
ಅವು ನನ್ನನ್ನು ಧಿಕ್ಕರಿಸಿದವು

ಅಹಂಕಾರದ ಗಾಯಗಳವು
ಇನ್ನಷ್ಟು ಹೊತ್ತಿಕೊಂಡು ಉರಿದವು
ಅವಮಾನದ ಗಾಯಗಳವು
ಮತ್ತಷ್ಟು ಕೀವು ಸುರಿಸಿದವು

ಇವತ್ತು ನಿರ್ಧರಿಸಿದ್ದೇನೆ
ಆ ಸೂರ್ಯನನ್ನು ಕೇಳಿಯೇ ಬಿಡುತ್ತೇನೆ
ಅವನು ನನ್ನ ಗಾಯಗಳನ್ನು
ಒಣಗಿಸಬಹುದು

ನಾಳೆ ಚಂದ್ರನ ಮೊರೆ ಹೋಗುತ್ತೇನೆ
ಅವನು ಅಳಿದುಳಿದ
ಕಲೆಗಳನ್ನೂ ಅಳಿಸಿಹಾಕಬಹುದು

ರಾತ್ರಿಗಳು ಹಗಲುಗಳು
ಹಗಲುಗಳು ರಾತ್ರಿಗಳು
ಗಾಯಗಳು ಮಾಯಬಹುದು .

## ಧ್ಯಾನ

ಎಷ್ಟೋ ವರ್ಷಗಳಿಂದ
ಧ್ಯಾನದೊಳಗೆ
ಲೀನವಾದಂತಿತ್ತು ಬೆಟ್ಟ.

ನಾನು ಕುತೂಹಲದಿಂದ
ಹತ್ತಿಹೋದೆ. ತುತ್ತ-
ತುದಿಗೇರಿದಾಗ ಮೈ-ಮನ
ಹಗುರಾದಂತೆ ಅನಿಸಿತು:

ನೋವುಗಳು ತಂತಾನೆ
ಕಳಚಿಕೊಂಡವು.
ದುಃಖ ಹೆಬ್ಬಂಡೆಯಾಗಿ
ಉರುಳಿಹೋಯಿತು.

ಉಲ್ಲಾಸದ ನಗೆ ನಕ್ಕು
ಹೂವು-ಹುಲ್ಲು ಪೊದೆಗಳಿಗೆ
ಕೂಗಿ ಹೇಳಿದೆ-
ನನಗೀಗ ಬದುಕುವ
ಮನಸ್ಸಾಗಿದೆ.

ಬೆಟ್ಟ ಪಿಸುಗುಟ್ಟಿತು
ನನಗೀಗ ಜ್ಞಾನೋದಯವಾಗಿದೆ.

## ಓನಮಿ*

ಒಂದೂರಿನಲ್ಲಿ ಓನಮಿ
ಎಂಬ ಮಲ್ಲನಿದ್ದ.
ಕಣಕ್ಕಿಳಿಯಲು ಆತ ಸದಾ ಸಿದ್ದ.

ಒಬ್ಬಿಬ್ಬರೆದುರಲ್ಲಿ
ಎಲ್ಲರ ಒದ್ದು ಕೆಡವುತ್ತಿದ್ದ.
ಒಟ್ಟಿನಲ್ಲಿ, ಗುಟ್ಟಿನಲಿ
ಈತ ಗುರು ಮೀರುವ ಶೂರ
ಮಂದಿಯೆಂದರೆ ಮಾತ್ರ
ಕಂದಿಹೋಗುವ ಮೋರೆ
ಜನ ನೆರೆದರೆಂದರೆ ಇನ್ನೂ ತೊಂದರೆ
ಬಾಲರೆದುರೂ ಈತ ಅಧೀರ.

ಹಲವು ಹತ್ತು ಸಲ ಕಾಳಗದಲ್ಲಿ
'ಮಂದಿರೋಗ' ಮರುಕಳಿಸಿ ಕಣದಲ್ಲಿ
ಎದುರಾಳಿಗಳಿಗೆ ಒಪ್ಪಿಸಿದ ಕಡಗ
ನಗೆಪಾಟಲಿಗೀಡಾದ ಹುಡುಗ.
ಇನ್ನಿಲ್ಲದಷ್ಟು ಸೋಲುಂಡು
ಏನಾದರೂ ಮಾಡಲೇಬೇಕೆಂದು
ಅಂದುಕೊಂಡು
ಕಿರೀಟವ ಕನಸುತ್ತ ಹೊರಟ.

ಹೀಗಿರುವಾಗ-
ರೋಗದ ಭಾಗ್ಯವೋ, ಓನಮಿಯ
ಯೋಗವೋ
ಕಡಲತಡಿಯೊಳಗೆ ಪುಟ್ಟ ಗುಡಿಯೊಳಗೆ
ಭಿಕ್ಷುವೊಬ್ಬ ಬಂದಿಳಿದ

*ಝೆನ್ ಕಥೆಯ ಆಧಾರ-ಜಾಪಾನಿ ಭಾಷೆಯಲ್ಲಿ ಮಹಾಸಾಗರದಲ್ಲಿ ಏಳುವ ಭಾರಿ ಅಲೆಗಳಿಗೆ ಓನಮಿ ಎನ್ನುತ್ತಾರೆ.

ಓನಮಿ ಓಡೋಡಿ ಬಂದು
ನೀನೇ ಗತಿಯೆಂದು ಅಂದು
ತನ್ನ ದುಃಖವನ್ನೆಲ್ಲ ತೋಡಿಕೊಂಡ.

ಭಿಕ್ಷು ನುಡಿದ-
ಓನಮಿಯಲ್ಲವೆ ನಿನ್ನ ಹೆಸರು?
ಹೋಗು ಅಲೆಗಳನ್ನು ಆಲಿಸು
ನೀನೇ ಅಲೆಗಳೆಂದು ಭಾವಿಸು
ನಿನ್ನ ಕಿವಿಗಳನ್ನು ಅಲೆಗಳಲ್ಲಿ ಇಡು
ನಿನ್ನನ್ನೇ ಅಲೆಗಳಲ್ಲಿ ಇಡು
ನೀನೀಗ ಮಲ್ಲನಲ್ಲ
ಮರೆತುಬಿಡು ಹಿಂದಿನದೆಲ್ಲ.

ಆಕಾಶದೆತ್ತರ ಎದ್ದು
ಎದುರಿಗಿರುವುದನ್ನೆಲ್ಲ ಒದ್ದು
ನೀನಾಗು
ಎಲ್ಲವನ್ನು ನಿನ್ನೊಳಗಿರಿಸಿಕೊಂಡು
ನೀನು ಅದೇ ಆಗು
ಅಲೆಗಳನ್ನು ಲಾಲಿಸು
ಅಲೆಗಳನ್ನು ಪಾಲಿಸು
ಹೋಗು ಹಿಂಬಾಲಿಸು.

ಓನಮಿ ಅಲೆಗಳಿಗೆ
ಗಾಳ ಹಾಕಿ ಕುಳಿತ
ಯೋಚನೆಗಳು ಬಲೆ ಬೀಸಿ
ಇವನನ್ನೆ ಹಿಡಿದವು.

ಓನಮಿ
ಅಲೆಗಳನ್ನು ನೋಡಿದ
ಅದರ ಹಿಂದೆ ಓಡಿದ

ಅಲೆಗಳನ್ನು ಕರೆದ.
ಗೋಗರೆದ.
ಅಲೆಗಳು ಇವನನ್ನೆ ನೋಡಿದವು
ಓಂದೆ ಓಂದೆ ಓಡಿದವು
ಇವನನ್ನು ಧಿಕ್ಕರಿಸಿದವು.

ಚುಕ್ಕಿಗಳು ಹೊಳೆದವು
ರಾತ್ರಿಗಳು ಸವೆದವು
ಹಗಲುಗಳು ಉರಿದವು
ಮುಂಗಾರುಗಳು ಮುದುರಿದವು
ಹಿಂಗಾರುಗಳು ಹಾರಿದವು
ಋತುಗಳು ಬಾಡಿದವು
ಮೋಡಗಳ ಹಿಂಡುಗಳು
ಓನಮಿಯನ್ನೆ ನೋಡಿದವು
ತಿರುಗಿ ತಿರುಗಿ ನೋಡಿದವು
ನೋಡಿಯೇ ನೋಡಿದವು.

ಓನಮಿ
ಅಲೆಗಳನ್ನು ಧ್ಯಾನಿಸಿದ
ಧ್ಯಾನಿಸಿದ,ಧ್ಯಾನಿಸಿದ....
ಅಲೆಯ ಹಾಗೆ ನಡುಗಿದ
ಅಲೆಯೊಳಗೆ ಅಡಗಿದ
ಅಲೆಗಳಿಗೆ ಕೊರಳಾದ
ಅಲೆಗಳ ಬೆರಳಾದ
ಕಣ್ಣಾದ, ಕಿವಿಯಾದ
ಮೈಯಾದ, ಮನವಾದ
ಅಲೆಯಲ್ಲೊಂದು ಅಲೆಯಾದ

ಮತ್ತೊಂದು, ಮಗದೊಂದು
ಇನ್ನೊಂದು ಅಲೆಯಾದ

ಅಲೆಯಂತೆ ಕುಣಿದ
ಆಕಾಶಕ್ಕೆ ನೆಗೆದ.
ದೇವಾಲಯ ಮುಚ್ಚಿ ಹೋಯ್ತು
ಬುದ್ಧನ ಪ್ರತಿಮೆ ಕೊಚ್ಚಿ ಹೋಯ್ತು
ಒಬ್ಬ ಸೂರ್ಯ ಕಡಲಲ್ಲಿದ್ದ
ಮತ್ತೊಬ್ಬ ದಡದಲ್ಲಿದ್ದ

ಓನಮಿ ದಡದಲ್ಲಿದ್ದ
ಓನಮಿ ಧ್ಯಾನದಲ್ಲಿದ್ದ
ಆ ದಿನವೆ ಓನಮಿ
ಅಲ್ಲಿಂದ ಹೊರಟ
ಕಣ್ಣೊಳಗೆ ಕಡಲಿತ್ತು
ಬೆಳಕಿನದೆ ಮಾಟ.

# ಸತಿ ಹೋಗುವುದಿಲ್ಲ ......

ನಿನ್ನ ಪ್ರೀತಿಯನ್ನಷ್ಟೇ ಉಟ್ಟು
ಹೊರಟು ನಿಂತಿದ್ದೇನೆ-
ಇಗೋ ಹೊರಟೆ-
ಎಲ್ಲವ ದಾಟಿ ಹೋಗಿಯೇ ಬಿಡುತ್ತೇನೆ

ನೀ ಬಿಟ್ಟು ಹೋದ
ತುಂಡು ನೆಲವನ್ನು
ಉತ್ತು ಬಿತ್ತಿ
ಫಸಲು ತೆಗೆಯುತ್ತೇನೆ

ಚಳಿ-ಗಾಳಿಯೊಡನೆ ಗುದ್ದಾಡಿ
ಕಲ್ಲುಗಳ ಜತೆಗೂಡಿ ಹಾಡಿ
ಮೈಮರೆಯುತ್ತೇನೆ

ಬಿಸಿಯಪ್ಪನನ್ನು, ತಂಪಣ್ಣನನ್ನು
ಒಬ್ಬರೆದುರಿಗೆ ಮತ್ತೊಬ್ಬರನ್ನು
ಹೂಡಿ ಆಟ ನೋಡುತ್ತೇನೆ

ದಿನಚರಿಯ ಪುಟಗಳಲಿ
ಮಳೆ ಹನಿ, ಮಿಂಚು-ಗುಡುಗಿನ
ಲೆಕ್ಕ ಬರೆದಿಡುತ್ತೇನೆ

ಇರುವುದೊಂದೆ ನದಿ
ಮೊಗೆದು ಮೊಗೆದು .....
ಇರುವುದೊಂದೆ ಬಾನು
ಅಳೆದು ಅಳೆದು .....
ಒಂದು ದಿನ ಸದ್ದಿಲ್ಲದೆ

ಸರಿದು ಹೋಗುತ್ತೇನೆ.

ಸತಿ ಹೋಗಬೇಡ .....
ನನ್ನ ಸಖಿಯಾಗು ಬಾ ಗೆಳತಿ
ಅಂದ ಪ್ರೀತಿ ಶಿವನೊಡನೆ
ನನ್ನ ಮರುಮದುವೆ, ಮನೆ.

## ೮೮ , ಫೆಬ್ರವರಿ ೩

ಕಾನ್ಪುರದ ಎಲ್ಲ ಬೀದಿಗಳಲ್ಲಿ
ಎಲ್ಲ ಮನೆಗಳಲ್ಲಿ
ಮನೆಯ ಮಾಳಿಗೆಯಲ್ಲಿ ಮೂರು
ಹೆಣಗಳು ತೂಗಿದವು ನಿಶ್ಚಿಂತೆಯಲ್ಲಿ.

ಗುಲಾಬಿಯಷ್ಟೇ ಮೃದು ಮನಸಿನ
ಜೀವಿಗಳು ಸಾವಿನಲ್ಲೂ
ನೋವಿನ ಮುಖವನ್ನೇ ಹೊತ್ತಿದ್ದವು.
ಮದುವೆಯ ಮಾರುಕಟ್ಟೆಯಲ್ಲಿ
ಬಿಕರಿಯಾಗದ ಜೀವಗಳು
ಕುಲ, ಗೋತ್ರ, ದೇವರು, ಧರ್ಮ
ಬಂಧು ಬಳಗದ ಸಮ್ಮುಖದಲ್ಲೆ
ನೇಣಿಗೇರಿದ್ದವು.

ಜಗತ್ತಿನ ತಂದೆ ತಾಯಿಯರು
ಅಚ್ಚರಿಯಿಂದ, ಭಯದಿಂದ
ನೋಡಿದರು. ತಂತಮ್ಮ
ಮಕ್ಕಳ ಮುಖವೆ
ಕಂಡಂತಾಗಿ ಹೌಹಾರಿದರು.

ಕೆಲವು ಎದೆಗಳು ಭಾರವಾದವು
ಹಲವು ಕಣ್ಣುಗಳು ನೀರಾದವು
ಒಂದಷ್ಟು ತುಟಿಗಳು
ಲೊಚಗುಟ್ಟಿ ಸುಮ್ಮನಾದವು.

ಆದಿನ ಕಾನ್ಪುರದ
ಎಲ್ಲ ಬೀದಿಗಳಲ್ಲಿ

ಎಲ್ಲ ಮನೆಗಳಲ್ಲಿ
ಹೆಣಗಳದ್ದೆ ವಾಸನೆ
ಎಲ್ಲ ನಿರುಮ್ಮಳ
ಅದನ್ನೆ ಉಸಿರಾಡಿದರು.

(ಹೆತ್ತವರು ವರದಕ್ಷಿಣೆ ತೆರುವುದನ್ನು ತಪ್ಪಿಸಲು ನೇಣು ಹಾಕಿಕೊಂಡ ಕಾನ್ಪುರದ ಮಮತಾ, ಪೂನಂ , ಅಲಕಾ ಸಹೋದರಿಯರು ಬರೆಸಿದ ಕವನ)

## ಧಿಕ್ಕರಿಸುತ್ತೇನೆ

ನಿನ್ನ ಸಿಟ್ಟು ಸೆಡವುಗಳನ್ನು
ಧಿಕ್ಕರಿಸುತ್ತೇನೆ.

ನಿನ್ನ ಪಂಜಿನಂತಹ ಕೈಗಳು
ಸುಕೋಮಲ ಹೂಗಳನ್ನು
ಹೊಸಕಿ ಹಾಕುವುದನ್ನೂ
ನಿನ್ನ ಕೆಂಡದಂತಹ ಕಣ್ಣುಗಳು
ಕೋಗಿಲೆಯ ಹಾಡುಗಳನ್ನು
ನಿಷ್ಕರುಣೆಯಿಂದ ಸುಡುವುದನ್ನೂ
ಧಿಕ್ಕರಿಸುತ್ತೇನೆ.

ನೀನು ಮೈಯೆಲ್ಲಾ
ಕಿಡಿಯಾಗಿರುವ ತನಕ
ಈ ಚೈತನ್ಯಮಯವಾದ
ಕಾಡನ್ನು ಪ್ರವೇಶಿಸಲು ನಿಷೇಧವಿದೆ.

ನಿನ್ನ ಕ್ರೌರ್ಯ, ಆಕ್ರೋಶಗಳನ್ನು
ಧಿಕ್ಕರಿಸುತ್ತೇನೆ.

ನಿನ್ನ ಸಾವಿರ ಸಾವಿರ
ನದಿಗಳಲ್ಲಿ ಬಂದೂಕಿನ
ಅಲೆಗಳು ತೇಲುವುದನ್ನೂ
ಪುಟಿಯುವ ಮೀನುಗಳ ಬದಲು
ಗುಂಡುಗಳು ಹಾರಾಡುವುದನ್ನೂ
ಓಕುಳಿಯ ಬದಲು
ನೆತ್ತರು ಹರಿಯುವುದನ್ನೂ
ಧಿಕ್ಕರಿಸುತ್ತೇನೆ.

ನೀನು ಮೈಯೆಲ್ಲಾ
ಬಂದೂಕಾಗಿರುವ ತನಕ
ಈ ಪ್ರೇಮಮಯ
ಸಮುದ್ರವನ್ನು ಪ್ರವೇಶಿಸಲು
ನಿಷೇಧವಿದೆ

ನಿನ್ನನ್ನು ಒಪ್ಪಿಕೊಳ್ಳುವುದೆಂದರೆ
ಈ ನೆಲದ ಒಡಲಿಂದ
ಕೇವಲ ಜ್ವಾಲಾಮುಖಿಗಳನ್ನೇ
ಅಗೆಯಬೇಕು.
ತಂಪಾದ ಕಾಡುಗಳನ್ನೂ
ತಣ್ಣನೆಯ ನದಿಗಳನ್ನೂ
ನಿರಾಕರಿಸಬೇಕು.

ನಿನ್ನನ್ನು ಒಪ್ಪಿಕೊಳ್ಳಬೇಕೆಂದರೆ
ಆ ಆಕಾಶದ ಒಡಲಲ್ಲಿ
ಕೇವಲ ಸುಡುವ
ಸೂರ್ಯರನ್ನೆ ಎಣಿಸಬೇಕು
ತಣ್ಣನೆಯ ಮೋಡಗಳನ್ನೂ
ತಂಪಾದ ಚಂದ್ರರನ್ನೂ
ನಿರಾಕರಿಸಬೇಕು.

ಜ್ವಾಲಾಮುಖಿಯೇ ಆಗಲಿ
ಸೂರ್ಯನೇ ಆಗಲಿ
ಸಿಟ್ಟಿನಿಂದ, ಆಕ್ರೋಶದಿಂದ
ಯಾರನ್ನೂ ಸುಟ್ಟ ದಾಖಲೆಗಳಿಲ್ಲ.

ನೀನು ಭೂಮಿಯ-ಆಕಾಶದ
ನಿಯಮಗಳನ್ನು ಮೀರಲಾರೆ.

## ಮಳೆ

ಮಳೆ ಎಂದರೆ
ಮೋಡ ಮಿಂಚು
ಗುಡುಗು ಸಿಡಿಲು.

ಮಳೆ ಎಂದರೆ
ಹಳ್ಳ ಕೊಳ್ಳ
ನದಿ ಹೊಳೆ.

ಮಳೆ ಎಂದರೆ
ಚಹಾ ಚುರುಮುರಿ
ಕಂಬಳಿ ಕೊಡೆ.

ಮಳೆ ಎಂದರೆ
ಸೋರುವ ಸೂರು
ಮುರಿದ ಚಾವಣಿ.

ಮಳೆ ಎಂದರೆ
ಬುಡ ಕಡಿದ ಮರ
ಉದುರಿದ ಹೂವು ಎಲೆ.

ಮಳೆ ಎಂದರೆ ಬೆಳೆ
ಮಳೆ ಎಂದರೆ ಹೊಳೆ
ಮಳೆ ಎಂದರೆ ಕಳೆ.

ಮಳೆ ಎಂದರೆ
ನನ್ನೊಳಗಿರುವ
ನಿನ್ನ ಪ್ರೀತಿಯ ಹಾಗೆ.
ಕನಸು ಕಾಮನಬಿಲ್ಲು-
ಮುಗಿದ ಬೇಸಿಗೆ.

# ಮಳೆ ಬರಲಿ.....

ಮಳೆ ಬರಲಿ.....
ಆದರೆ
ಹಸಿರು ಹೊಲಗದ್ದೆಗಳನ್ನೂ
ರೈತರ ಸುಖ ನಿದ್ದೆಗಳನ್ನೂ
ಕಸಿದುಕೊಳ್ಳದಿರಲಿ.

ಮಳೆ ಬರಲಿ.....
ಆದರೆ
ಹುಲ್ಲಿನ ಛಾವಣಿಗಳನ್ನೂ
ಮಣ್ಣಿನ ಗೋಡೆಗಳನ್ನೂ
ಕೆಡವಿ ಹಾಕದಿರಲಿ.

ಮಳೆ ಬರಲಿ.....
ಇರಲೊಂದು ಪುಟ್ಟ ಮನೆ
ಹೊದೆಯಲು ಬೆಚ್ಚನೆಯ
ಕಂಬಳಿ ಎಲ್ಲರಿಗೂ ಸಿಗಲಿ.

ನೊಂದ ಬಯಲುಗಳಿಗೆ
ಬೆಂದ ಬೆಟ್ಟಗಳಿಗೆ
ಬಾಯಾರಿದ ಕೆರೆ ಬಾವಿ
ಹಳ್ಳ ಕೊಳ್ಳಗಳಿಗೆ-
ಬರಲಿ ಮಳೆ ಬರಲಿ.

'ಧೋ' ಎಂದು ಸುರಿದು
ಹೊರಟು ನಿಂತಾಗ
ನೆಲ-ಮುಗಿಲು ನಗಲಿ
ಏಳು ಬಣ್ಣಗಳಲ್ಲಿ.

# ವಿಮರ್ಶೆ

ನೀನು ನಿಂತ ನೆಲವನ್ನು
ನಂದನವನವೆಂದೂ
ಕೂತ ಬಂಡೆಯನ್ನು
ಐರಾವತವೆಂದೂ
ನಡೆದಾಡಿದ ಭಂಗಿ
ನಟರಾಜನದೆಂದೂ
ಒಪ್ಪಿಕೊಳ್ಳಲು
ನನ್ನಿಂದ ಆಗೊಲ್ಲ.

ನೀನು ಮೋಜಿಗಾಗಿ
ನದಿಯನ್ನು ಈಜಿದ್ದನ್ನು
ಸಮುದ್ರ ದಾಟಿದಷ್ಟು
ಸೋಜಿಗದಿಂದ ನೋಡಲು
ನನ್ನಿಂದ ಆಗೊಲ್ಲ.

ನೀನು ಮೂಸಿದ್ದು
ಮಂದಾರವೆಂದೂ
ಪೂಸಿದ್ದು ಶ್ರೀಗಂಧವೆಂದೂ
ಸಾಬೀತು ಮಾಡಲು
ನನ್ನಿಂದ ಆಗೊಲ್ಲ.

ನೀನು ಗೆರೆ ಎಳೆದದ್ದೆ
ರಂಗೋಲೆಯೆಂದು
ಸುತ್ತಿದ ಸೊನ್ನೆಯೆ
ಸೂರ್ಯನೆಂದು ಸಂಭ್ರಮಿಸಲು
ನನ್ನಿಂದ ಆಗೊಲ್ಲ.

ನಿಜ ಹೇಳಬೇಕೆಂದರೆ
ನನಗೆ ಬೆಳಕಿನ ಬಗ್ಗೆ
ವ್ಯಾಮೋಹವಾಗಲಿ
ಕತ್ತಲೆಯ ಬಗ್ಗೆ
ಕನಿಕರವಾಗಲಿ ಇಲ್ಲ.

ನನ್ನ ತೋಟದಲ್ಲಿ
ನೂರಾರು ಬಣ್ಣದ ಹೂಗಳಿವೆ .
ಮಾವಿನ ಮರದ
ಜೊತೆ ಜೊತೆಗೆ
ಬೇವಿನ ಮರಗಳೂ ಇವೆ.
ಹಾಗಲ ಹಾಗೂ ಸಿಹಿಗುಂಬಳ
ಒಂದೇ ಚಪ್ಪರವನ್ನು
ತಬ್ಬಿ ನಿಂತಿವೆ.

ಕೆಲವರನ್ನು ಬೆಟ್ಟ ಹತ್ತಿಸಿದ್ದರೆ
ಅನುರಾಗದಿಂದಲ್ಲ
ಹಲವರನ್ನು ಕಂದಕಕ್ಕೆ
ನೂಕಿದ್ದರೆ ಆಕಸ್ಮಿಕವೂ ಅಲ್ಲ!

## ಸ್ಯೋಲ್ ಪದ್ಯಗಳು

### ೧.ಪದಕ ಸಿಗಲಿಲ್ಲ

ನಮ್ಮ ಕ್ರೀಡಾಪಟುಗಳು
ಜಿಂಕೆಯಿಂದ
ಓಟದ ಪಾಠ ಕಲಿತುಕೊಳ್ಳಲಿಲ್ಲ.
ಮರಿಮೀನುಗಳನ್ನು
ಗುರುವೆಂದು ಒಪ್ಪಿಕೊಳ್ಳಲಿಲ್ಲ
ಆನೆಯಿಂದ ಭಾರ ಎತ್ತುವ
ಕಲೆ ಕರಗತಗೊಳಿಸಿಕೊಳ್ಳಲಿಲ್ಲ.
ಹಾಗಾಗಿ ಸಿಯೋಲ್‌ನಲ್ಲಿ
ಒಂದೂ ಪದಕ ಸಿಗಲಿಲ್ಲ.

### ೨.ಅಲಂಕರಿಸಿವೆ

ಸೂರ್ಯ ಪ್ರತಿದಿನ ಕಡಲಲ್ಲಿ
ಹನ್ನೆರಡು ತಾಸಿನ ಈಜಿನ
ಅಭ್ಯಾಸ ನಡೆಸಿದ್ದಾನೆ.
ಚಂದ್ರ ಮೈಲಿಗಟ್ಟಲೆ ಓಡಿದರೂ
ದಣಿಯದೆ ನಸುನಗುತ್ತಾನೆ.
ಕೋಟಿ ವರುಷಗಳಿಂದ
ಈಜು ಮತ್ತು ಓಟದ ದಾಖಲೆಗಳು
ಸೂರ್ಯಚಂದ್ರರ ಹೆಸರಿನಲ್ಲೆ ಇವೆ.
ಇಬ್ಬರೂ ಸೇರಿ ಸಂಪಾದಿಸಿದ
ಪದಕಗಳು ಆಕಾಶದ
ಗೋಡೆಗಳನ್ನು ಅಲಂಕರಿಸಿವೆ.

### ೩.ಬೆನ್ ಜಾನ್ಸನ್‌ಗೆ

ನಿನ್ನೊಳಗೊಂದು ಚಿರತೆಯಿತ್ತು
ನಿನಗದು ಪದಕ ತಂದುಕೊಟ್ಟಿತು.
ನಿನ್ನೊಳಗೊಂದು ನರಿಯೂ ಇತ್ತು
ಅದು ನಿನ್ನನ್ನೆ ತಿಂದು ತೇಗಿತು.

### ೪.ಸಲ್ಲುವುದಿಲ್ಲ

ಅದೆಷ್ಟೋ ಯೋಜನಗಳನ್ನು
ದಾಟಿ ಬರುವ ಹಕ್ಕಿಗಳನ್ನು
ಯಾರೂ ಹೂಮಾಲೆ ಹಾಕಿ
ಬರಮಾಡಿಕೊಳ್ಳುವುದಿಲ್ಲ.
ಸಪ್ತಮದಲ್ಲಿ ಹಾಡಿದರೂ
ಕೋಗಿಲೆಗೆ ಯಾರೂ
ಶಾಲು ಹೊದಿಸಿ ಸನ್ಮಾನಿಸುವುದಿಲ್ಲ
ಹುಲ್ಲು-ಕಡ್ಡಿ ಹೆಕ್ಕಿ ಹೆಣೆದ
ಗುಬ್ಬಿಯ ಗೂಡಿಗೆ
ಯಾರೂ ಪ್ರಶಸ್ತಿ ನೀಡುವುದಿಲ್ಲ.

ಅದು ಯಾವತ್ತೂ ಹಾಗೆ.....
ಸಲ್ಲಬೇಕಾದವರಿಗೆ
ಪದಕಗಳು, ಪದವಿಗಳು,
ಪ್ರಶಸ್ತಿಗಳು ಸಲ್ಲುವುದಿಲ್ಲ.

(೧೯೮೮ರಲ್ಲಿ ಸ್ಯೋಲ್‌ನಲ್ಲಿ ನಡೆದ ಒಲಂಪಿಕ್ಸ್ ಕ್ರೀಡಾಕೂಟದ ನೆನಪಿನಲ್ಲಿ ಬರೆದ ಕವನಗಳು)

## ಪಂಜಾಬಿಗೆ ಪ್ರೀತಿ

ಗಂಗ ತುಂಗ ಯಮುನಾ ಗೋದಾವರಿ
ನದಿಗಳೆಲ್ಲವನ್ನು ನಾನು ಪ್ರೀತಿಸುತ್ತೇನೆ
ಬಿಯಾಸ್ ನದಿಯೆ
ನಿನ್ನನ್ನು ಹೆಚ್ಚು ಪ್ರೀತಿಸುತ್ತೇನೆ

ನಾನು ಹಡೆದ ಧರ್ಮಗಳನ್ನೂ
ಸಾಕಿ ಸಲಹಿದ ದೇವರುಗಳನ್ನೂ
ಗೌರವಿಸಿದ್ದೇನೆ.
ಸಿಖ್ ಧರ್ಮವೇ ಗುರುಗ್ರಂಥ ಸಾಹೇಬನೇ
ನಿನಗೂ ತಲೆಬಾಗುತ್ತೇನೆ.

ಒಮ್ಮೆ ನಿನ್ನ ಕೈಯಲ್ಲಿ ಬಂದೂಕಿತ್ತು
ಎಂಬುದನ್ನು ಮರೆತುಬಿಡುತ್ತೇನೆ.
ನೀನು ಮೂಡಿಸಿದ ರಕ್ತದ ಕಲೆಗಳನ್ನು
ಯಾವತ್ತಿಗೂ ಅಳಿಸಿಹಾಕುತ್ತೇನೆ.

ಗಾಯಗೊಂಡ ಮರಿಹಕ್ಕಿಯೇ
ನನ್ನ ಬೆಚ್ಚನೆಯ ಗೂಡಿಗೆ
ನಿನ್ನನ್ನು ಮರಳಿ ಒಯ್ಯುತ್ತೇನೆ.

ಬಿಸಾಡಿ ಹೋದ ಮರಿಮೀನೇ
ತಣ್ಣನೆಯ ನದಿಗಳ ನಾಡಿಗೆ
ನಿನ್ನನ್ನು ಮರಳಿ ಒಯ್ಯುತ್ತೇನೆ.

ಸಿಡಿಲು-ಗುಡುಗಿನ ಆಕಾಶರಾಯನೆ
ಕೇಳು-

ಈ ತಾಯಿ ನಿನ್ನಲ್ಲಿ
ಮೊರೆಯಿಡುತ್ತಿದ್ದಾಳೆ.....

ಹೇಳು-
ಮತ್ತೆ ಮಳೆ ಬರುವುದೇ?
ಸುಡುವ ಈ ನೆಲದೊಳಗೆ
ಹೊಳೆ ಹರಿವುದೆ?

## ನೀನೆಂಬುದಿಲ್ಲದಿದ್ದರೆ.....
## ನಾನೆಂಬುದೂ ಇಲ್ಲ

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ಗಿಡ ಮರ ಹೂಗಳಿಲ್ಲ.
ಹಕ್ಕಿ ಹಾಡು, ಗೂಡುಗಳಿಲ್ಲ.
ಕತ್ತಲ ತೊಡೆಯುವ ಸೂರ್ಯ
ಕಲ್ಮಶಗಳನ್ನು ತೊಳೆಯುವ ನದಿ
ಜಗತ್ತೆ ಅತ್ತಂತೆ ಕಾಣಿಸಿಸುವ ಮಳೆ
ಜಗತ್ತೆ ನಕ್ಕಂತೆ ಕಾಣಿಸುವ
ಬೆಳದಿಂಗಳು, ಯಾವುದೂ ಇಲ್ಲ.

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ಮೆಟ್ಟಿದರೂ ಮಿಡುಕದ ನೆಲ
ಮಿಂಚಿ ಮಳೆಗರೆವ ಮುಗಿಲು
ತಗ್ಗದ, ಬಗ್ಗದ, ಜಗ್ಗದ
ಬೆಟ್ಟಗಳ ಸಾಲು
ಝೇಂಕರಿಸುವ ದುಂಬಿ
ನಿಟ್ಟುಸಿರಿಡುವ ಗಾಳಿ
ಹರ್ಷ ತುಂಬಿದ ಹಗಲು
ವಿಷಾದ ಸೂಸುವ ಇರುಳು
ಯಾವುವೂ ಇಲ್ಲ.

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ಪಂಜಗಳಿದ್ದೂ ಪಂಜರದೊಳಗೆ

ಬಂದಿಯಾದ ಸಿಂಹ
ನರ್ತನವೆಂದರೇನು ಎಂದು
ಕೇಳುವ ನವಿಲು
ಕಾಡಿನ ಜಾಡರಿಯದ ಜಿಂಕೆ
ಹಾರಲು ಹಿಂಜರಿಯುವ ಹಕ್ಕಿ
ಯಾವುದೂ ಇಲ್ಲ.

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ಚಿಂದಿ ಆಯುವ ಹುಡುಗ
ಹೂಮಾರುವ ಹುಡುಗಿ
ಕಳ್ಳ, ಕದೀಮ, ಕಲಾವಿದ,
ಠೇಂಕರಿಸುವ ರಾಜಕಾರಣಿ
ಹೂಂಕರಿಸುವ ಉಗ್ರಗಾಮಿ
ಯಾರ್‍ಯಾರೂ ಇಲ್ಲ.

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ನೇಣಿಗೇರಿದ ನಿರುದ್ಯೋಗಿ
ಪ್ರೀತಿಸಿ ಕೈಕೊಟ್ಟ ಪ್ರೇಮಿ
ಹೆತ್ತು ಬಿಸಾಡಿಹೋದ ತಾಯಿ
ವರದಕ್ಷಿಣೆ , ಸೀಮೆಎಣ್ಣೆ,
ಕೋರ್ಟು, ಕಛೇರಿ,
ಜಾಮೀನೂ ಜೈಲು
ಯಾವುದೂ ಇಲ್ಲ.

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ನೀರಿಲ್ಲದ ನಳ್ಳಿ
ಕೈಕೊಡುವ ಕರೆಂಟು

ವೋಟು, ಬಜೆಟು,
ಸ್ಲಮ್ಮು, ಸ್ಲೋಗನ್ನು
ಸಾರಾಯಿ, ತುರಾಯಿ
ಯಾವುದೂ ಇಲ್ಲ.

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ಮಸೀದಿ, ಮಠ, ಮುಷ್ಕರ
ಮೆರವಣಿಗೆಗಳಿಲ್ಲ.
ಭಾಷಣ, ಭರವಸೆ
ಪ್ರಣಾಳಿಕೆಗಳಿಲ್ಲ.
ಗಡಿ, ಗನ್ನು,
ಅಪಘಾತ, ಅಣುಬಾಂಬು
ಯಾವುದೂ ಇಲ್ಲ.

ನೀನೆಂಬುದಿಲ್ಲದಿದ್ದರೆ
ನಾನೆಂಬುದೂ ಇಲ್ಲ.
ದುಃಖ, ದುಗುಡ, ದುಮ್ಮಾನವಿಲ್ಲ.
ಆಸೆ , ಅಕ್ಕರೆ, ಅಹಂಕಾರಗಳಿಲ್ಲ.
ಆತ್ಮನೂ ಇಲ್ಲ, ಪರಮಾತ್ಮನೂ ಇಲ್ಲ.
ಧ್ಯಾನ, ಮೋಕ್ಷ, ಮರಣ,
ಸಮಾಧಿ, ಸ್ಮಾರಕಗಳಿಲ್ಲ.
ಅಣುವೂ ಇಲ್ಲ
ಬ್ರಹ್ಮಾಂಡವೂ ಇಲ್ಲ.

ಇಲ್ಲಿ....
ನಾನು-ನೀನು
ಏನೇನೂ ಅಲ್ಲ.

# ಮೌನದ ಗಂಟೆ

(ಭಾರತದಿಂದ ಗಡೀಪಾರು ಮಾಡಲ್ಪಟ್ಟ ಬೌದ್ಧಧರ್ಮ ಚೀನಾ , ಜಪಾನುಗಳಿಗೆ ವಲಸೆ ಹೋಗಿ ಕ್ರಮೇಣ ಅಲ್ಲಿ ಕವಲೊಡೆದ ಶಾಖೆಗಳಲ್ಲಿ ಪ್ರಮುಖವಾದ ಶಾಖೆಯೆ 'ಝೆನ್.' ಶೊಯ್‌ಚಿ ಒಬ್ಬ ಝೆನ್ ಧರ್ಮಗುರು . ಆತ ತನ್ನ ಶಿಷ್ಯರಿಗೆ ಸೂತ್ರಗಳ ಪಠಣ ಕೈಬಿಟ್ಟು ಕೇವಲ ಧ್ಯಾನದಲ್ಲಿ ನಿರತರಾಗುವಂತೆ ಆದೇಶ ನೀಡುತ್ತಾನೆ . ದೇವಾಲಯ ಹಗಲು ರಾತ್ರಿಯ ಪರಿವೆಯಿಲ್ಲದೆ ಮೌನದಲ್ಲಿ ಮುಳುಗುತ್ತದೆ . ಅದೊಂದು ದಿನ ಇದ್ದಕ್ಕಿದ್ದ ಹಾಗೆ ದೇವಾಲಯದಿಂದ ಸೂತ್ರಗಳ ಪಠಣ ಕೇಳಿ ಬರುತ್ತದೆ . ಗುರುವಿನ ಮರಣವಾರ್ತೆ ಆ ಮೂಲಕ ಎಲ್ಲೆಡೆ ಬಿತ್ತರಗೊಳ್ಳುತ್ತದೆ .)

ಅದೊಂದು ದಿನ ಶೊಯ್‌ಚಿ

ಗಂಟೆಗಳಿಗೆ ಮೊಳಗಿದ್ದು ಸಾಕು ಅಂದ
ತಾಳಗಳಿಗೆ ಕುಣಿದದ್ದು ಸಾಕು ಅಂದ
ಮಂತ್ರಗಳಿಗೆ ಪಠಿಸಿದ್ದು ಸಾಕು ಅಂದ.

ಗಂಟೆಗಳಿಗೆ ಒಂದು ಚಣ ಗಾಬರಿಯಾಯಿತು
ತಾಳಗಳು ಕುಣಿತದ ಮಧ್ಯೆ ಕೆರಳಿ ನಿಂತವು
ಮಂತ್ರಗಳು ಮುಖ ಊದಿಸಿಕೊಂಡವು
ಶಿಷ್ಯರು ತಳಮಳಿಸಿದರು.

೨.

ಇದೀಗ ಶೊಯ್‌ಚಿ ಎಲ್ಲರಿಗೂ
ಧ್ಯಾನಿಸಲು ಹೇಳಿದ.

ಇಷ್ಟಾನಿಷ್ಟವನೆಲ್ಲ ಮೆಟ್ಟಿ
ಗಂಟೆಗಳು ಗರಬಡಿದು ನಿಂತವು
ತಾಳಗಳು ತಲ್ಲೀನವಾದವು
ಮಂತ್ರಗಳು ಮಗ್ನವಾದವು
ದೇವಾಲಯ ಧ್ಯಾನಸ್ಥವಾಯಿತು.

ಶಿಷ್ಯರು-
ಬುದ್ಧನನ್ನೊಮ್ಮೆ ನೋಡಿದರು

ಮುಗುಳುನಗೆಯನ್ನೂ ನೋಡಿದರು
ಧ್ಯಾನದಲ್ಲಿ ಮುಳುಗಿದರು.

೩.
'ಧ್ಯಾನಿಸಿ' ಅಂದದ್ದು
ಅಲ್ಲೇ ಭುಸುಗುಡುತ್ತಾ
ಅಡ್ಡಾಡುತ್ತಿದ್ದ ಸೂರ್ಯನ
ಕಿವಿಗೂ ಬಿತ್ತು.
ಅಗ್ನಿಪರ್ವತದೊಳಗೊಂದು
ಅಂತರ್ಗಾಮಿ ನದಿ
ತಣ್ಣಗೆ ಹರಿದು ಹೋಯಿತು.

'ಧ್ಯಾನಿಸಿ' ಅಂದದ್ದು
ಅಲ್ಲೇ ಚಿನ್ನಾಟವಾಡುತ್ತಿದ್ದ
ಮರಿಮೋಡಗಳ ಹಿಂಡಿಗೂ ತಟ್ಟಿತು
ಮಿಂಚಿನ ಸೆಳಕೊಂದು
ಮೆರೆದು ಮರೆಯಾಯಿತು.

ಹೀಚು, ಮೊಗ್ಗು, ಹೂವು, ಹಣ್ಣು,
ಕೆಂಪೆಲೆ, ಹಸಿರೆಲೆ, ಹಣ್ಣೆಲೆಗಳ
ಲೆಕ್ಕಾಚಾರದಲ್ಲಿ ಮಗ್ನವಾಗಿದ್ದ
ಹೆಮ್ಮರಗಳಿಗೆ ಗಾಳಿಗಿವಿಯೂದಿ
'ಧ್ಯಾನಿಸಿ' ಅಂತು.
ಅತ್ತಿಂದಿತ್ತ ಹೊಯ್ದಾಡಿ
ಧ್ಯಾನಕ್ಕೆ ಶರಣಾಯಿತು.

ಧುಮುಧುಮು ಎಂದು
ಧುಮುಗುಡುತ್ತಾ ಧುಮ್ಮಿಕ್ಕಿ
ಹರಿಯುತ್ತಿದ್ದ ನದಿಯ
ಎದೆ ಸುಳಿಯೊಳಗೆ

ದನಿಯೊಂದು ಚಿಮ್ಮಿ
ತಡೆದು ನಿಲ್ಲಿಸಿತು.

ಚಂದ್ರ ಓಡೋಡಿ ಬಂದು
ಇರುಳ ಮನೆಗೆ ದೀಪ ಹಚ್ಚಿದ
ಬೆಳಕು ಸಾಲದು
ಎಂದು ಅವನಿಗೂ ಅನ್ನಿಸಿತು.

ದುಂಬಿಯ ಝೇಂಕಾರದ ಹಾಗೆ
ಹಕ್ಕಿಯ ಹಾಡಿನ ಹಾಗೆ
ಹೂವಿನ ಗಂಧದ ಹಾಗೆ
ಧ್ಯಾನ ಎಲ್ಲರನ್ನೂ ತಬ್ಬುತ್ತಿತ್ತು
ದಟ್ಟವಾಗುತ್ತಿತ್ತು.

೪.
ಅದೊಂದು ದಿನ ಶೊಯ್‌ಚಿ
ಇನ್ನಿಲ್ಲವಾದ.

ಸೂರ್ಯ ಬೆಂಕಿಯ ನಾಲಗೆ ತೆರೆದು
ನದಿ ಧುಮ್ಮಿಕ್ಕಿ ನಡೆದು
ಶೊಯ್‌ಚಿ ಇನ್ನಿಲ್ಲ ಎಂದು ಸಾರಿದವು.

ಗಂಟೆಗಳು ಮೊಳಗತೊಡಗಿದವು
ತಾಳಗಳು ಕುಣಿಯತೊಡಗಿದವು
ಮಂತ್ರಗಳ ಗರ್ಜನೆ ಮುಗಿಲು ಮುಟ್ಟಿತು.

ಯಾರಿಗೋ ಗೊತ್ತಾಯಿತು
ಶೊಯ್‌ಚಿ ಇನ್ನಿಲ್ಲ
ಎಲ್ಲರಿಗೂ ಗೊತ್ತಾಯಿತು-
ಶೊಯ್‌ಚಿ ಇನ್ನಿಲ್ಲ

ಜಗತ್ತೇ ನುಡಿಯಿತು
ಶೊಯ್‌ಚಿ ಇನ್ನಿಲ್ಲ

೫.

ಶಿಷ್ಯರು ನೋಡಿದರು:
ಸದ್ದುಗದ್ದಲ ಸಂಭ್ರಮದಲ್ಲಿ
ಕರಗುತ್ತಿದ್ದ
ಬುದ್ಧನನ್ನು ನೋಡಿದರು

ದುಂಬಿಯ ಝೇಂಕಾರದಲ್ಲಿ
ಹಕ್ಕಿಯ ಹಾಡಿನಲ್ಲಿ
ಹೂವಿನ ಪರಿಮಳದಲ್ಲಿ
ಕರಗುತ್ತಿದ್ದ
ಮುಗುಳುನಗೆಯನ್ನು ನೋಡಿದರು.

ಧೂಪದ ಹೊಗೆ ಕಣ್ಣು
ಕವಿಯುವ ತನಕ ನೋಡಿದರು.

# ಚಂದ್ರನನ್ನು ಕರೆಯಿರಿ ಭೂಮಿಗೆ

ಪುಟ್ಟ ಮಕ್ಕಳು ಚಂದ್ರನನ್ನು
ಕರೆಯುತ್ತಿದ್ದಾರೆ ಭೂಮಿಗೆ.

ನಾನೂ ಮಗುವಾಗಿದ್ದಾಗ
ಮೊಗ್ಗಿನಂತಹ ಬೆರಳುಗಳನ್ನು
ಮಡಿಸಿ ಅರಳಿಸಿ
ಚಂದ್ರನನ್ನು ಕರೆದಿದ್ದೆ ಭೂಮಿಗೆ.

ನನ್ನ ತಮ್ಮಂದಿರು, ತಂಗಿ
ಗೆಳೆಯ ಗೆಳತಿಯರು
ಯಾರೆಲ್ಲ ಕರೆದಿದ್ದರು
ಭೂಮಿಗೆ.

ಗೂಡಲ್ಲಿ ಕಣ್ಣರಳಿಸಿ
ಕೂತಿರುವ ಮರಿಹಕ್ಕಿ
ನದಿಯೊಳಗೆ ಈಸುತ್ತಿರುವ
ಮರಿ ಮೀನು, ಯಾರೆಲ್ಲ
ಕರೆದಿದ್ದರು ಚಂದ್ರನನ್ನು ಭೂಮಿಗೆ.

೨.

ಅಂದು ತೊದಲು ನುಡಿಯುತ್ತಿದ್ದ
ಮರಿಕೋಗಿಲೆ ಇಂದು
ಪಂಚಮದಲ್ಲಿ ಹಾಡಿದೆ.

ಅಂದು ನದಿಯೊಳಗೆ ಈಸುತ್ತಿದ್ದ
ಮರಿ ಮೀನು ಇಂದು
ಸಮುದ್ರವ ಸೇರಿದೆ.

ಅಂದು ಚಂದ್ರನನ್ನು ಕರೆಯುತ್ತಿದ್ದ
ನನ್ನ ಬೆರಳುಗಳು ಇಂದು
ಭೂಗೋಳ , ವಿಜ್ಞಾನ ಪುಸ್ತಕಗಳ
ಪುಟ ತಿರುವಿ ಒರಟಾಗಿವೆ.

೩.

ಮುಗಿಲು ಮುಟ್ಟಿ ನಿಂತಿರುವ ಹೆಮ್ಮರ
ಮೊಳಕೆಯೊಡೆದ ದಿನಗಳನ್ನು
ಮೆಲುಕು ಹಾಕುವ ಹಾಗೆ
ನಾನೊಮ್ಮೆ ಹಿಂದಿರುಗಿ ನೋಡಲೆ?

ಆಸೆ, ದುಃಖ, ಹರ್ಷ, ವಿಷಾದದ
ಎಲೆಗಳನ್ನು ಕಳಚಿಕೊಂಡು
ಧ್ಯಾನದಲ್ಲಿರುವಂತಿದೆ ಮರ
ನೋಡಿಯೂ ಸುಮ್ಮನಿರಲೆ?

ಕಂದಮ್ಮಗಳೆ.....
ಕೇಕೆ ಹಾಕಿ ಕುಣಿಕುಣಿದು
ಕರೆಯಿರಿ ಚಂದ್ರನನ್ನು ಭೂಮಿಗೆ
ಹೂವಿನ ಹಾಗೆ ಬೆರಳುಗಳನ್ನು
ಅರಳಿಸಿ ನೀವೇ
ಕರೆಯಿರಿ ಚಂದ್ರನನ್ನು ಭೂಮಿಗೆ.

ನಾನು ನಾನಿರುವಂತೆಯೇ
ನೋಡುವೆ ಒಂದು ಘಳಿಗೆ.

# ಕನ್ನಡಿ ನನ್ನನ್ನು ನೋಡಿತು

(ಝೆನ್‌ಗುರು ಚುಅಂಗ್‌ತ್ಸು ಹೀಗೆ ಹೇಳುತ್ತಾನೆ : ಕನ್ನಡಿಯನ್ನು ನೋಡಿ- ಅದು ಏನನ್ನೂ ಸ್ವೀಕರಿಸುವುದಿಲ್ಲ , ಏನನ್ನೂ ತಿರಸ್ಕರಿಸುವುದಿಲ್ಲ. ಅದು ಏನಿದ್ದರೂ ಗ್ರಹಿಸುತ್ತದೆ)

ಕನ್ನಡಿ ನನ್ನನ್ನು ನೋಡಿತು.

ನನ್ನ ಕಣ್ಣಂಚಿನ ನೀರನ್ನೂ
ನನ್ನ ತುಟಿಯಂಚಿನ ನಗೆಯನ್ನೂ
ನನ್ನ ಕೆನ್ನೆಯಲ್ಲಿನ ಲಜ್ಜೆಯನ್ನೂ
ಕನ್ನಡಿ ನೋಡಿತು.

ನನ್ನ ಗಂಟಲೊಳಗಿನ ಮಾತನ್ನೂ
ನನ್ನ ನಾಲಗೆಯೊಳಗಿನ ರುಚಿಯನ್ನೂ
ನನ್ನ ಕಿವಿಯೊಳಗಿನ ಲಜ್ಜೆಯನ್ನೂ
ಕನ್ನಡಿ ನೋಡಿತು.

ನನ್ನ ಚಿಂತೆಹಣೆ ಸುಕ್ಕುಗಳನ್ನೂ
ಮೋಡದಂತಹ ಮುಂಗುರುಳುಗಳನ್ನೂ
ಒಂದೆರೆಡು ಮಿಂಚಿನ ಗೆರೆಗಳನ್ನೂ
ಕನ್ನಡಿ ನೋಡಿತು.

ನನ್ನ ತೋಳುಗಳ ಅಕ್ಕರೆಯನ್ನೂ
ಬೆರಳುಗಳ ಹಠಮಾರಿತನವನ್ನೂ
ಕಾಲುಗಳ ಕ್ರೌರ್ಯವನ್ನೂ
ಉಗುರುಗಳ ಜಾಣತನವನ್ನೂ
ಕನ್ನಡಿ ನೋಡಿತು.

ಹರಿವ ನದಿ ರಕ್ತದಂಥ ನನ್ನ ಆಸೆಗಳನ್ನೂ
ಮೂಳೆಯಷ್ಟು ಗಟ್ಟಿಯಾದ ಅಹಂಕಾರವನ್ನೂ

ಮಾಂಸಲ ಮೃದು ಪ್ರೀತಿಯನ್ನೂ
ಕನ್ನಡಿ ನೋಡಿತು.

ನಾನು ಮೊಳಕೆಯೊಡೆದು ಸಸಿಯಾಗಿ
ಮರವಾಗಿ ಮೆರೆದದ್ದನ್ನು
ಕನ್ನಡಿ ನೋಡಿತು.

ಮೊಗ್ಗರಳಿ ಹೂವಾಗಿ
ಹಣ್ಣಾಗಿ ಮಾಗಿ ಮರುಗಿದ
ನನ್ನನ್ನು ಕನ್ನಡಿ ನೋಡಿತು.

ಕನ್ನಡಿ ನನ್ನನ್ನು ಪ್ರೀತಿಸಲಿಲ್ಲ
ಕನ್ನಡಿ ನನ್ನನ್ನು ತಿರಸ್ಕರಿಸಲಿಲ್ಲ
ಅದು ನನ್ನನ್ನು ಸುಮ್ಮನೆ ನೋಡಿತು.

## ಸ್ಥಿತಿ

ಹೂವಿನ ಗೋಣು ಮುರಿದು
ಹೂದಾನಿಯಲ್ಲಿ ಇರಿಸುತ್ತೇನೆ.

ಗೆದ್ದಲು ಹುಳುಗಳು ಗೋಡೆಯ
ಮೇಲೆ ಶಿಲ್ಪ ಕಡೆದಿದ್ದರೆ
ಭಗ್ನಗೊಳಿಸುತ್ತೇನೆ.

ಸಕ್ಕರೆಯ ಬೆಟ್ಟು ಹೊತ್ತು
ಹರಿವ ಸಾಲು ಇರುವೆಗಳನ್ನು
ಒತ್ತರಿಸಿ ಗುಡಿಸಿಹಾಕುತ್ತೇನೆ.

ಸೂರಿನಡಿ ಗುಬ್ಬಿಗಳು
ಕಾಳು ಕಡ್ಡಿ ಹೆಕ್ಕಿ ಗೂಡು
ಹೆಣೆದಿದ್ದರೆ ಕಿತ್ತು ಬೀದಿಗೆಸೆಯುತ್ತೇನೆ.

ಗುಬ್ಬಿಯ ಸೂರನ್ನು
ಇರುವೆಯ ಅನ್ನವನ್ನೂ
ಹೂವಿನ ಬದುಕನ್ನೂ
ಕಸಿದುಕೊಳ್ಳುವ ಈ
ಕೊಲೆಪಾತಕ ಕೈಗಳಿಗೆ
ಯಾರ ಭಯವೂ ಇಲ್ಲ.

ಜಗತ್ತಿನ ಸಂಕಟಗಳಿಗೆ
ಕಿಟಕಿ ಮುಚ್ಚಿ ಕುಳಿತರೆ
ತೆರೆಯಲು ಯಾರೂ ಬರುವುದಿಲ್ಲ.
ನೋವು, ನಿಟ್ಟುಸಿರು
ಅಸಮತೆ, ಅನ್ಯಾಯ

ಈ ಗಾಳಿಯಲ್ಲೇ ಇದೆ.
ನಾನೂ ಅದನ್ನು ನಿರ್ಲಜ್ಜೆಯಿಂದ
ಉಸಿರಾಡುತ್ತಿದ್ದೇನೆ.

ಎಲ್ಲರಿಗೆ ಅನಿಸುವಂತೆ
ನನಗೂ ಒಮ್ಮೊಮ್ಮೆ ಅನಿಸುತ್ತದೆ
ನನ್ನೆದೆಯ ಸೂರ್ಯ
ಇನ್ನು ಹೆಚ್ಚು ದಿನ ಉರಿಯಲಾರ.

ಹಸಿವು , ದುಃಖ, ಕ್ರೌರ್ಯ
ಎಲ್ಲವನ್ನೂ ಇನ್ನಿಲ್ಲದಷ್ಟು
ಸಹಜವಾಗಿ ಚಿತ್ರಿಸಿ
ಜೀವ ತುಂಬಿದ ಕಲಾವಿದ
ಯಾರೋ ಎಂದು
ನನ್ನನ್ನೇ ಕೇಳಿಕೊಳ್ಳುತ್ತೇನೆ.

ಗಂಧವನ್ನೂ ವಿಷವನ್ನೂ
ಒಂದೇ ಎಂದು
ಉಸಿರಾಡುತ್ತಿರುವೆನಾದರೆ
ನನಗಿನ್ನೂ ಆಸೆ ಇದೆ.

ಮುಳ್ಳಿನದೊಂದು ಹೆಜ್ಜೆ
ಮಣ್ಣಿನದೊಂದು ಹೆಜ್ಜೆ
ದಾರಿ ದೂರವಿದೆ.

# ದಿನಚರಿ

ರಜದಲ್ಲೇನು ಮಾಡುವಿರಿ ಎಂದು ಕೇಳಿದರು ಟೀಚರು
ಊರಿಗೆ ಹೋಗುತ್ತೇವೆ ಎಂದರು ಒಬ್ಬಿಬ್ಬರು
ಊಟ, ಆಟ ಎಂದು ಪಿಸುಗುಟ್ಟಿ ನಕ್ಕರು ತುಂಟರು
ಒಬ್ಬರಿದ್ದಂತಿದ್ದರಲ್ಲವೆ ಇನ್ನೊಬ್ಬರು?
ತಲೆಗೊಂದರಂತೆ ಮಾತು ಗದ್ದಲಿಸಿದರು
ಅದೇನು ಮಾಡುತ್ತಿರೊ ಮಾಡಿ ಅಂದರು ಟೀಚರು
ಮಾಡಿದ್ದನ್ನೆಲ್ಲಾ ದಿನವೂ ಬರೆದಿಡಿ ಅಂದರು
'ಇದ್ದದ್ದು ಇದ್ದ ಹಾಗೆಯೇ' ಎಂದೂ ಸೇರಿಸಿದರು.

ಹೀಗೆ ಊಟ ಆಟದ ಜೊತೆಗೆ
ದಿನಚರಿ ಬರೆಯುವುದೂ ಸೇರಿಕೊಂಡಿತು
ಆಡಿದ್ದು, ನೋಡಿದ್ದು, ಮಾಡಿದ್ದು
ಬರೆದಂತೆಲ್ಲ ಚುರುಮುರಿ ಉಂಡೆಯದೆ ರುಚಿ ಕಂಡಿತು.

ರಜೆಯಲ್ಲೂ ಬರೆಯುವುದೇ? ಎಂದು
ಅಜ್ಜಿ ಗೊಣಗುಟ್ಟಿದರು.
ನೆಪಕ್ಕೆ ಟೀಚರಿನ ಹೆಸರು
ಇವಳದೆ ಕಾರು-ಬಾರು ಎಂದು
ಅಮ್ಮ ಮೆಣಸು ಕುಟ್ಟಿದರು.
ನಾವೂ ಬರೆಯುತ್ತೇವೆ ಎಂದು
ತಮ್ಮಂದಿರು ಹಠ ಮಾಡಿದರು.

ಹೀಗೆ

ಹೊಂಡದ ಮೀನುಗಳಿಗೆ ಮಂಡಕ್ಕಿ ಕೊಟ್ಟಿದ್ದು
ನಿಂಬೆಯ ಗಿಡದಲ್ಲಿದ್ದ ಮೊಟ್ಟೆ ಮರಿಯಾಗಿ
ಚಿಟ್ಟೆಯಾಗಿ ಹಾರಿದ್ದು

ಸೇವಂತಿಗೆ ದಾಸವಾಳಕ್ಕೆ ನೀರೆರೆದದ್ದು
ದಿನಚರಿಯಲ್ಲಿ ಸೇರಿತು.

ಜರಿಲಂಗಕ್ಕಾಗಿ ಅತ್ತು ಅಮ್ಮನ ಮೇಲೆ
ಮುನಿಸಿಕೊಂಡಿದ್ದು
ಅಪ್ಪ ತರುವ ಮಿಠಾಯಿಗಾಗಿ ರಾತ್ರಿಯೆಲ್ಲಾ
ಕಣ್ಣಿಗೆ ಎಣ್ಣೆ ಬಿಟ್ಟು ಕೂತದ್ದು
ದಿನಚರಿಯಲ್ಲಿ ಸೇರಿತು.

ಅಂಡಾ ಭಂಡಾ ಆಡಿ ಕುಂಟಾಬಿಲ್ಲೆ ಗೆದ್ದದ್ದು
ಒಟ್ಟು ಮಾಡಿದ ಬಳೆ ಚೂರುಗಳನ್ನು
ಗುಟ್ಟಾಗಿ ನಿಧಿಯಂತೆ ಅಡಗಿಸಿಟ್ಟಿದ್ದು
ದಿನಚರಿಯಲ್ಲಿ ಸೇರಿತು.

ಕೊಳಲೂದಿ ಅಜ್ಜಿಯ ಕಿವಿ ತೂತು ಮಾಡಿದ್ದು
ಮಣ್ಣಿಗೆ ನೀರು ಹಾಕಿ ಪಾಯಸವೆಂದು
ತಂಗಿಗೆ ನಂಬಿಸಿದ್ದು
ದಿಚರಿಯಲ್ಲಿ ಸೇರಿತು.

ತೆಂಗಿನ ಗರಿಯ ವಾಚಿನ ಆಸೆಗೆ
ಪರಮವೈರಿಯೊಂದಿಗೂ ರಾಜಿಯಾದದ್ದು
'ನಿದ್ರಾ ಸುಂದರಿ' ಕಥೆಯೋದುತ್ತಾ
ಹಾಗೆಯೆ ನಿದ್ರೆ ಹೋದದ್ದು
ದಿನಚರಿಯಲ್ಲಿ ಸೇರಿತು.

ಕನಸಿನ ತುಂಬಾ ಪೆಪ್ಪರಮೆಂಟಿನ
ಮಳೆ ಸುರಿದದ್ದು
ನಿಜ ಜೀವನದಲ್ಲಿ ಪೈಗೆ ಪೈ ಕೂಡಿಟ್ಟರೂ
ಪೆಪ್ಪರಮೆಂಟುಕೊಳ್ಳದೆ ಇದ್ದದ್ದು
ದಿನಚರಿಯಲ್ಲಿ ಸೇರಿತು.

೨

ಕಾದೂ ಕಾದೂ ಕೊನೆಗೆ
ಶಾಲೆ ಕದ ತೆರೆಯಿತು
ಆವೊತ್ತಿನ ಮಾತುಕತೆ ಕಿತ್ತಾಟ
ಕುಣಿತ ದಿನಚರಿ ಕುರಿತೆ ಆಗಿತ್ತು
ಕೊನೆಗೆ ಎಲ್ಲರೂ ಸೇರಿ
ಎಲ್ಲವನ್ನೂ ಓದಿದ್ದೂ ಆಯಿತು.

ನನಗೋ..... ನನ್ನ ಗೆಳತಿಯರ
ದಿನಚರಿಯೆ ಚೆನ್ನಾಗಿದೆ ಅನ್ನಿಸತೊಡಗಿತ್ತು.
ನನ್ನ ಬಳಿ ಇಲ್ಲದ್ದು ಅವರ ಬಳಿ
ಇದೆ ಎಂದೆನಿಸುತ್ತಿತ್ತು.
ಅವರ ಬಳಿ ಇದ್ದದ್ದೆಲ್ಲವೂ ನನಗೂ
ಬೇಕೆನಿಸುತ್ತಿತ್ತು.

ಅವರ ದಿನಚರಿಗಳಲ್ಲಿ
ಬಣ್ಣ, ಬೆರಗು, ಬೆಡಗು
ಎಲ್ಲವೂ ಇದೆ ಎಂದೆನಿಸುತ್ತಿತ್ತು.
ಆ ರಂಗು, ರಂಜನೆ, ರೋಮಾಂಚನ
ಹೊಟ್ಟೆ ಉರಿಸುತ್ತಿತ್ತು.
ಹುಲಿ, ಕರಡಿ, ಆನೆ, ಕೊಕ್ಕರೆಗಳು
ರೈಲುಬಂಡಿ, ಅರಮನೆ ಆಟಿಕೆಗಳು
ಕಣ್ಣಿಗೆ ಕಟ್ಟಿದಂತಿತ್ತು.

ಟೀಚರೇನೋ ಎಲ್ಲರಿಗೂ ಕೊಡುವಂತೆ
ನನಗೂ ಮಾರ್ಕು ಕೊಟ್ಟಿದ್ದರು
ಅಭಿಮಾನವೊ? ಅವಮಾನವೊ?
ಕಣ್ಣೀರು ತುಂಬಿ ತುಳುಕುತ್ತಿತ್ತು.

೩

ಆಮೇಲೇನೂ ದಿನಚರಿ ಬರೆಯಲು
ಯಾರ ಒತ್ತಾಯವೂ ಇರಲಿಲ್ಲ
ಬರೆಯುವುದೂ ನಿಲ್ಲಲಿಲ್ಲ
ಆದರೆ ಇದ್ದದ್ದು ಇದ್ದ ಹಾಗೆಯೇ ಅಲ್ಲ!

ಕಲ್ಪನೆಗೆ ಕುದುರೆ ರಥ ಕಟ್ಟಿದ್ದಷ್ಟೇ ಗೊತ್ತು
ರಥ ಓಡಿತು.
ಆಸೆಹಕ್ಕಿಗೆ ರೆಕ್ಕೆ ಮೂಡಿಸಿದಷ್ಟೇ ಗೊತ್ತು
ಹಕ್ಕಿ ದೂರ ದೂರ ಹಾರಿತು.

ಇವತ್ತಿಗೂ ರಥ ಓಡುತ್ತಲೇ ಇದೆ
ಕುದುರೆಗಳ ಕಾಲು ಸೋತಂತಿಲ್ಲ
ಇವತ್ತಿಗೂ ಹಕ್ಕಿ ಹಾರುತ್ತಲೇ ಇದೆ
ಕಿಂಚಿತ್ತೂ ಆಯಾಸಗೊಂಡಿಲ್ಲ.

ಇಷ್ಟು ದಿನಗಳಾದ ಮೇಲೆ
ಇಷ್ಟು ದೊಡ್ಡವಳಾದ ಮೇಲೆ
ಕಡಲಲ್ಲಿ ಗುಮ್ಮನಂತೆ ನಿಂತಿರುವ
ಭಾರಿ ಹಡಗನ್ನ ನೋಡಿದಾಗೆಲ್ಲ
ನೆನಪಿನ ತಂತಿಗಳು ಮಿಡಿದು
ನಾನು ಕೈಯಾರೆ ಮಾಡಿ ತೇಲಿಸಿದ
ಕಾಗದದ ದೋಣಿ ಕಣ್ಣೊಳಗೇ ನಿಲ್ಲುತ್ತೆ.

ಆ ಹರ್ಷ , ವಿಷಾದ , ಒಲುಮೆ
ಆಸೆ ಆಕಾಂಕ್ಷೆಯ ಕುಲುಮೆ
ಇಂದಿಗೂ ಬೆಚ್ಚಗೆ ಉರಿದಿದೆ.

## ಸೇತುವೆ ಕುಸಿದಿದೆ

ನಾನು ಕಳಿಸಿದ್ದು ಮಿಂಚುಗಳನ್ನು
ತಲುಪಿದ್ದು ಮಿಣುಕು ಹುಳುಗಳೇ?
ಹಾಗಾದರೆ ಮಿಂಚೆಲ್ಲಿ ಹೋಯಿತು?

ನನ್ನ ಕುಂಚದಿಂದ ಮೂಡಿದ ಮೊಲ
ನಿನ್ನಲ್ಲಿಗೆ ಕೊಂಬಿನೊಂದಿಗೆ ಓಡಿಬಂದಿತ್ತೆ?
ಹಾಗಾದರೆ ಮೊಲವೆಲ್ಲಿ ಮಾಯವಾಯಿತು?

ನಾನು ಕಿವಿಯಲ್ಲಿ ಕಿಣಿಕಿಣಿಸಿದ್ದು
ಮೌನದ ಗಂಟೆಯನ್ನು
ಕತ್ತರಿಸಿದ್ದು ಸಿಡಿಲೆ?
ಹಾಗಾದರೆ ಸಿಡಿಲಾದರೂ ಎಲ್ಲಿಂದ ಬಂತು?

ನಾನು ಮುಟ್ಟಿಸ ಬಯಸಿದ್ದು ಬೆಂಕಿ ಬಿಸಿಯನ್ನು
ಬೆಚ್ಚಗಿತ್ತೆ? ಬಿಸಿ ನೀರಿನ ಹಾಗೆಯೇ?
ಹಾಗಾದರೆ ಬೆಂಕಿಗೇನಾಯಿತು?

ಕಗ್ಗಂಟಿನ ಹಾದಿ ಕಾಡಿನಂತಿದೆ.
ತಣ್ಣಗೆ ಕೂತು ಧ್ಯಾನಿಸಿದಂತೆ
ಮಬ್ಬು ಸರಿಯುತ್ತಿದೆ.....

ಪೊರೆ ಕಳಚಿದ ಕಣ್ಣಲ್ಲಿ
ಚಿತ್ರ ಮೂಡುತ್ತಿದೆ
ಏನೂ ಅಲ್ಲ-
ಸೇತುವೆ ಕುಸಿದಿದೆ.

ನನ್ನ ಪುಟ್ಟ ಪುಟ್ಟ ಹೆಜ್ಜೆಯೊಂದಿಗೆ
ನನ್ನೆತ್ತರಕ್ಕೂ ಬೆಳೆದ ಸೇತುವೆ
'ನಾನು' ಇರುವಂತೆಯೆ ಕುಸಿದಿದೆ.

ನಿನ್ನೆ ಮುಸ್ಸಂಜೆಯನ್ನು ಬೆಚ್ಚಗೆ
ತರುಣನ ಹಾಗೆ ಕಳೆದ ಸೇತುವೆ
ಇದೀಗ ಸಾವಿನ ಸುಖ ನಿದ್ದೆಯಲ್ಲಿದೆ.

ನಾನೇ ನೆಟ್ಟು ನೀರುಣಿಸಿ
ಬೆಳೆಸಿದ ಗಿಡದ ಹೂವ
ಪರಾಗ, ಕೇಸರದ ಸಮೇತ
ಒಂದು ಹನಿ ಮಕರಂದ
ಅಲ್ಲಾಡದ ಹಾಗೆ ಅಷ್ಟೂ ದಳಗಳೊಂದಿಗೆ
ಖುದ್ದಾಗಿ ಒಯ್ಯುವೆನೆಂದು
ಕೊಟ್ಟ ಮಾತು ಇನ್ನೂ
ಹಾಗೆಯೆ ಇರುವಂತೆ
ಸೇತುವೆ ಕುಸಿದಿದೆ.

ಮಿಂಚುಗಳನ್ನು ಮಿಣುಕು
ಹುಳುಗಳನ್ನಾಗಿಸಿ
ಮೊಲಕ್ಕೆ ಕೊಂಬು ಮೂಡಿಸಿ
ಬೆಂಕಿಯನ್ನು ಬಿಸಿನೀರನ್ನಾಗಿಸಿ
ಇಕ್ಕಟ್ಟಿಗೆ ಸಿಲುಕಿಸುತ್ತಲೇ
ಬಿಕ್ಕಟ್ಟಿನಿಂದ ಬಿಡುಗಡೆಗೊಳಿಸಿದ
ಸೇತುವೆ ಕುಸಿದಿದೆ.

ಕುಸಿದ ಸೇತುವೆಯಾಚೆ
ಎಂದಿನಂತೆ ಹೂವು ಅರಳಿದೆ.
ಕುಸಿದ ಸೇತುವೆಯ ಮೇಲೆ ಕೂತು
ಕೋಗಿಲೆ ತನ್ನ ಪಾಡಿಗೆ ತಾನು ಹಾಡಿದೆ.

ನದಿಯಲ್ಲಿ ನೀರು ಹರಿದಿದೆ
ಸಂತನಂತೆ ಸಹಜವಾಗಿದೆ .

## ಮುಗಿಯದ ಕತೆ

ಅವನು ರಾಮನು
ಗುಣ ಸಂಪನ್ನನು
ನೀತಿ ನೇಮಕ್ಕೆ
ತಲೆಬಾಗುವನು
ಗುರುಹಿರಿಯರಿಗೆ
ಪ್ರೀತಿಪಾತ್ರನು
ಯಾರನ್ನೂ ನೋಯಿಸನು.

ಅವನು ರಹೀಮನು
ಅವನೂ ಗುಣ ಸಂಪನ್ನನು
ಕೊಂಚ ಸಂಕೋಚದ ಸ್ವಭಾವ
ಸದಾ ಧ್ಯಾನಸ್ಥನು
ಏಕಾಂತ ಪ್ರಿಯನು.

ಹೀಗೊಮ್ಮೆ
ರಾಮನೂ ರಹೀಮನೂ
ಭೆಟ್ಟಿಯಾದರು
ಅವನೊಳಗೆ ಅವನೊ
ಇವನೊಳಗೆ ಅವನೊ
ಎಂಬಂತೆ ಒಂದಾದರು.

ಒಂದೇ ನೋಟ
ಒಂದೇ ಮಾಟ
ಕಣ್ಣಿದ್ದವರಿಗೂ
ಕಗ್ಗಂಟಾದರು.
ಸೂರ್ಯಚಂದ್ರರ
ಜೋಡಿ ಕೂಡಿ
ನಲಿದಿದ್ದು ನೋಡಿ

## ಕಾಗೆ ಮತ್ತು ಕೋಗಿಲೆ

ಅಚ್ಚಚ್ಚು ಬೆಲ್ಲದಚ್ಚು
ಅಲ್ಲಿ ನೋಡು ಇಲ್ಲಿ ನೋಡು
ಸಂಪಂಗಿ ಮರದಲ್ಲಿ
ಕಾಗೆ ನೋಡು.....
ಗೆಳತಿ ಗುಣುಗುಣಿಸಿದಳು.

ನಾನು ನೋಡಿದೆ:
ಮರದ ಮೇಲೆ ಕುಳಿತುಕೊಂಡು
ಹುಳುವೊಂದನ್ನು ಅವುಚಿ ಹಿಡಿದು
ಕಾಗೆ ಕೂಗುತ್ತಿತ್ತು.
ಕಾ......ಕಾ......ಕಾ.....ಕಾ.....
ಅಯ್ಯೋ! ಎಂಥಾ ದನಿ!
ಕಿವಿ ಕತ್ತರಿಸಿತು
ಕಿರಿಕಿರಿಯೆನಿಸಿದರೂ.....
ಹತ್ತು ಮಂದಿಗೆ
ಹಂಚಿ ತಿನ್ನುವ ಹುರುಪು
ಪ್ರೀತಿ, ಮೆಚ್ಚುಗೆ ಮೂಡಿತು.

ಅಚ್ಚಚ್ಚು ಬೆಲ್ಲದಚ್ಚು
ಅಲ್ಲಿ ನೋಡು ಇಲ್ಲಿ ನೋಡು
ಮಾವಿನ ಮರದಲ್ಲಿ
ಕೋಗಿಲೆ ನೋಡು.....
ಗೆಳತಿ ಗುಣುಗುಣಿಸಿದಳು.

ನಾನು ನೋಡಿದೆ:
ಮರದ ಮೇಲೆ ಕುಳಿತುಕೊಂಡು
ಕೋಗಿಲೆ ಹಾಡುತ್ತಿತ್ತು
ಕುಹೂ.....ಕುಹೂ.....ಕುಹೂ......

ಆಹಾ! ಎಂಥಾ ದನಿ!
ಕಿನ್ನರಿ ಕಿವಿ ತುಂಬಿತು.

ಜುಮ್ಮೆನಿಸಿದರೂ.....
ಕರುಳ ಕುಡಿಯನ್ನ
ಕಡೆಗಣಿಸುವ ಕಟುಕತನ
ಕಹಿ ಮೂಡಿಸಿತು.

ಕಾಗೆ-ಕೋಗಿಲೆ , ಕೋಗಿಲೆ-ಕಾಗೆ
ಏತ-ದೂತ ಆಡಿದವು,
ಕಾ.....ಕುಹೂ.....ಕುಹೂ.....ಕಾ
ಏತ-ದೂತ ಆಡಿದವು.

ನಾನು ಸಂಪಂಗಿ ಮರವನ್ನು ಕೇಳಿದೆ
ನನ್ನ ಎದೆಯಲ್ಲಿ ಕಾಗೆಯನ್ನಿಡು.

ನಾನು ಮಾವಿನ ಮರವನ್ನು ಕೇಳಿದೆ
ನನ್ನ ಕೊರಳಲ್ಲಿ ಕೋಗಿಲೆಯನ್ನಿಡು.

# ಯಾವುದು ಇಷ್ಟ ?

ಕಾಮನಬಿಲ್ಲು ಅಷ್ಟೂ ಬಣ್ಣಗಳನ್ನು ಚೆಲ್ಲಿತು
ನನಗೆ ನಾನೆ ಕೇಳಿಕೊಂಡೆ
ನಿನಗೆ ಯಾವ ಬಣ್ಣ ಇಷ್ಟ?

ಗೊರಟೆ, ಗುಲಾಬಿ, ಸೇವಂತಿಗೆ
ದಾಸವಾಳ, ಕನಕಾಂಬರ, ಮಲ್ಲಿಗೆ
ಹೆಣೆದು ನಿಂತವು
ಅನ್ನಿಸಿತು:
ಆಯ್ಕೆ ಬಹಳ ಕಷ್ಟ.

೨.
ಹುಲಿ, ಕರಡಿ, ಆನೆ, ಅಳಿಲು?
ಜಿಂಕೆ, ಕೊಕ್ಕರೆ, ಕಾಜಾಣ, ನವಿಲು?
ನನಗೆ ನಾನೆ ಕೇಳಿಕೊಂಡೆ
ನಿನಗೆ ಯಾವುದು ಇಷ್ಟ?

ರೆಕ್ಕ, ಪುಕ್ಕ, ಕಿವಿ, ಕೊರಳು
ನಡಿಗೆ, ಉಡಿಗೆ, ಕೆನೆತ, ಕುಣಿತ
ಕಣ್ಣು ತುಂಬಿದವು
ಅನ್ನಿಸಿತು:
ಆಯ್ಕೆ ಬಹಳ ಕಷ್ಟ.

೩.
ವ್ಯಂಗ್ಯ, ಕಟಕಿ, ಕೋಪ, ತಾಪ
ಮದ ಮತ್ಸರ, ದಾಹ, ದುಃಖ
ಕವಣೆ ಬೀಸಿದವು
ನನಗೆ ನಾನೇ ಕೇಳಿಕೊಂಡೆ

ನೀನು ಯಾವುದರಿಂದ ಮುಕ್ತ?

ಮದ್ದು ಗುಂಡು, ಫಿರಂಗಿ, ಕತ್ತಿಗಳು
ಪರಸ್ಪರ ಸೆಣಸಾಡಿದವು
ಅನ್ನಿಸಿತು ಆಯ್ಕೆ ಬಹಳ ಕಷ್ಟ.

೪.

ಮುಗಿಲು ಮುಟ್ಟುತ್ತಾ ಇತ್ತು ಒಂದು ಮರ
ಅದರಲ್ಲೊಂದು ಹಕ್ಕಿ-ಹಾಡು
ನೆಲಕ್ಕಂಟಿಕೊಂಡಿತ್ತುಒಂದು ಪೊದೆ
ಅದರಲ್ಲೊಂದು ಇರುವೆ-ಗೂಡು.

ಹುಲ್ಲುಕಡ್ಡಿಯನ್ನೂ ನೋಯಿಸಲಾರೆ
ಹಾಗಂದಿದ್ದನಲ್ಲವೆ ಬುದ್ಧ?

ಆ ಹುಲ್ಲು ಕಡ್ಡಿಗೆ
ತಲೆಬಾಗಿ ವಂದಿಸಿದೆ
ಮೆಲ್ಲಗೆ ತುಟಿ ಸೋಕಿಸಿ ಮುತ್ತು ಕೊಟ್ಟೆ.

## ಗಿಣಿಗೆ ಪಂಜರದ ಹಂಗು ಯಾಕಿಲ್ಲ ?

ಅವ್ವ.....
ಹಸಿರು ರೆಕ್ಕೆ ಕೆಂಪು ಕೊಕ್ಕಿನ ಗಿಣಿ
ಮುದ್ದು ಮುದ್ದಾಗಿ ಮಾತಾಡಿ
ಸೂರ್ಯಂಗೂ ಚಂದ್ರಂಗೂ ಮಂಕುಬೂದಿಯನೆರಚಿ
ಹೂವು, ಎಲೆ, ಗಂಧ ಗಾಳಿಯ
ಗಮನ ಎತ್ತೆತ್ತಲೋ ಸೆಳೆದು
ಚಿಕ್ಕೆಯ ಬಳಗಕ್ಕೆ ಮಾಯಕಿನ್ನರಿ ನುಡಿಸಿ ಮೈಮರೆಸಿ
ನದಿಯೂ ಬೆಟ್ಟವೂ
ಎವೆ ಮುಚ್ಚಿ ಬಿಚ್ಚುವುದರೊಳಗೆ
ಕೋಟಿ ಕ್ರಿಮಿ ಕೀಟಗಳ ಕಣ್ಣಿಗೆ ಕಪ್ಪನೆಯ ಮುಸುಕೆಳೆದು
ಮುಚ್ಚಿರುವಂತೆಯೆ ಪಂಜರಶಾಲೆಯ ಬಾಗಿಲು ,
ಭದ್ರ ಬಿಗಿ ಕಾವಲು-ಮಾಯವಾಯಿತಲ್ಲ.....

ಅವ್ವ.....
ಹಸಿರು ರೆಕ್ಕೆ ಕೆಂಪು ಕೊಕ್ಕಿನ ಗಿಣಿ
ಮತ್ತೊಂದು ಚಣದಲ್ಲಿ
ಗುಲಾಬಿ ರೆಕ್ಕೆ ಹಳದಿ ಕೊಕ್ಕಿನ ಗಿಣಿ
ಮಗದೊಂದು ಚಣದಲ್ಲಿ
ನೀಲಿ ರೆಕ್ಕೆ ಕಪ್ಪು ಕೊಕ್ಕಿನ ಗಿಣಿ
ಗಳಿಗೆಗೊಂದು ಬಣ್ಣ ಮೆತ್ತಿ
ರಂಗಮಂಟಪದೊಳಗೆ ಸುತ್ತಿ
ಮೊಲವಾಗಿ ಛಂಗನೆ ನೆಗೆದು
ಮೇನಕೆಯಾಗಿ ತಕಧಿಂ ಎಂದು ಕುಣಿದು
ಮಾಟಗಾತಿಯ ದಂಡ ಮೆಟ್ಟಿ
ಮಿಂಚಾಗಿ ಮಿಣಿ ಮಿಣಿಗುಟ್ಟಿ
ಮಾಯವಾಯಿತಲ್ಲ.....

ಅವ್ವ.....
ಹಸಿರು ರೆಕ್ಕೆ ಕೆಂಪು ಕೊಕ್ಕಿನ ಗಿಣಿ
ಮರಿಗುಬ್ಬಿಯ ಹಾಗೆ ಗಳಿಗೆಗಳನ್ನು ಗಬಾಯಿಸಿ
ಗೂಬೆಯ ಹಾಗೆ ಗುಕ್ಕೆಂದು ಕೂಗಿ
ಗುಂಗಿಯ ಹುಳುವಾಗಿ ಗೀಗೀ ಪದ ಹಾಡಿ
ಹಾರಿ ಹೋಯಿತಲ್ಲ.....

ಅವ್ವ.....
ಜಾಲಿಯ ಮರವನ್ನೇರಿಕುಳಿತಿರಬಹುದೆ ಗಿಣಿ?
ಚಂದನದ ಮರದೊಳಗೆ ಕುಳಿತಿರಬಹುದೆ ಗಿಣಿ?
ವೇದ ಶಾಸ್ತ್ರಾಗಮಗಳನ್ನು ನುಚ್ಚಾಗಿಸಿ-ನುಂಗಿ
ಅಣುಬಾಂಬುಗಳನ್ನು ಅತ್ತಿಯ ಹಣ್ಣಾಗಿಸಿ ಮೆದ್ದು
ಪಂಜರದೊಳಗೆಯೆ ಇದ್ದು, ಇಲ್ಲ ಎನಿಸುವ ಹಾಗೆ ಇದ್ದೂ
ಆಟವಾಡುತ್ತಿದೆಯೆ ಗಿಣಿ?

ಅವ್ವ.....
ಅಂಬೆಗಾಲಿನ ಕಂದ ಮೋರೆ ತಿರುವಲು ಬೇಡ
ಕುತೂಹಲದ ಕುಡಿ ಚಿವುಟಿ ಬಿಸಾಡಲು ಬೇಡ
ನವಿಲುಗಣ್ಣಿಗೆ ಸುಣ್ಣ ಹಚ್ಚಲು ಬೇಡ
ಎದೆಯ ಗುಟ್ಟೇನದು ಹೇಳು... ನಿನ್ನಾಣೆ
ಪಿಳ್ಳಂಗೋವಿ ಊದಿ ಪುಕಾರು ಹಬ್ಬಿಸುವುದಿಲ್ಲ.....

ಹೇಳವ್ವ.....
ಜಲಬಿಂದುವಿಗೆ ಪದ್ಮಪತ್ರದ ಹಂಗು ಯಾಕಿಲ್ಲ?
ಕಿಂಚಿತ್ತೂ ಪ್ರೀತಿ, ಕಿಂಚಿತ್ತೂ ಮೈತ್ರಿ ಯಾಕಿಲ್ಲ?
ಗಿಳಿಗೆ ಪಂಜರದ ಹಂಗು ಯಾಕಿಲ್ಲ?

## ಎಲ್ಲ ಹುಡುಗಿಯರ ಕನಸು

ಅವ್ವ ಕೇಳೇ ನಾನೊಂದ ಕನಸ ಕಂಡೇ.....
ಅವ್ವ ಕೇಳೇ ಕನಸೊಂದ ಕಂಡೆನೆ..........
ಮುಂಗೋಳಿ ಕೂಗಿತ್ತು ಮೂಡಲ್ಲಿ ಕೆಂಪಿತ್ತು
ಬೆಳ್ಳಿಯೂ ಮರಳಿತ್ತು ಹಕ್ಕಿಯೂ ಹಾಡಿತ್ತು
ಮಲ್ಲಿಗೆ ಸಂಪಿಗೆ ಘಮ್ಮೆಂದು ಬಿರಿದಿತ್ತು
ಹಾದಿಲಿ ಇಬ್ಬನಿಯು ಮುತ್ತಾಗಿ ಸುರಿದಿತ್ತು. ||ಅವ್ವ||

ಕಣ್ಣರೆಪ್ಪೆ ಬಿಗಿಯೆ ಕದ ತಟ್ಟಿ ಒಳಬಂದ
ಕಾರಿರುಳ ಕೆಂಜೆಡೆಗೆ ಚಂದಿರನ ಮುಡಿದಿದ್ದ
ಕಾಲ್ಗೆಜ್ಜೆ ಕುಣಿಸುತ್ತ ಶರಣು ಶರಣು ಅಂದ
ಮುಕ್ಕಣ್ಣ ತಾನೆಂದು ಮುಂಗೈಗೆ ಮುತ್ತಿಟ್ಟ
ಕೀಟಲೆ ನಗೆ ನಕ್ಕು ಕಪ್ಪುರವ ಮುಂದಿಟ್ಟ
ಒಲ್ಲೆ ಎಂದರೂ ಬಿಡದೆ ಒಲವು ಬೇಡಿದವನವ್ವ.....
ಮುದ್ದಾಗಿ ಮಾತಾಡಿ ಮರುಳು ಮಾಡಿದನವ್ವ ||ಅವ್ವ||

ತುಂಬೆಯ ಹೂ ಬಿಡಿಸಿ ತುರುಬಿಗೆ ಮುಡಿಸಿದ
ಒಂದೊಂದು ಕಿವಿಯಲ್ಲೂ ದುಂಬಿಯ ಇರಿಸಿದ
ಮಿಂಚಿನ ಹುಳುವಲ್ಲೇ ಮೂಗುತಿಯ ಮಾಡಿದ
ನೇರಳೆ ಹಣ್ಣಿನ ಹಾರವ ತೊಡಿಸಿದ
ಕೀಟಲೆ ನಗೆ ನಕ್ಕು ಕಪ್ಪುರವ ಮುಂದಿಟ್ಟ
ಒಲ್ಲೆ ಎಂದರೂ ಬಿಡದೆ ಒಲವು ಬೇಡಿದನವ್ವ.....
ಮುದ್ದಾಗಿ ಮಾತಾಡಿ ಮರಳು ಮಾಡಿದನವ್ವ. ||ಅವ್ವ||

ಹುಲಿಚರ್ಮ ಹೊದ್ದರೂ ಹಾಲುಮನಸಿನ ಹುಡುಗ
ಡೊಳ್ಳ ಬಾರಿಸಿ, ಢಕ್ಕೆಯ ಬಡಿದು, ಡಮರುಗ ನುಡಿಸಿದ
ನವಿಲ ಹಾಗೆ ಕುಣಿದು ಮಿಂಚು ಮಳೆ ಕರೆದ
ಹಕ್ಕಿಪಿಕ್ಕಿಯಂಗೆ ಕೂಗಿ ನಕ್ಕು ನಗಿಸಿದ
ಕೀಟಲೆ ನಗೆ ನಕ್ಕು ಕಪ್ಪುರವ ಮುಂದಿಟ್ಟ

ಒಲ್ಲೆ ಎಂದರೂ ಬಿಡದೆ ಒಲವು ಬೇಡಿದನವ್ವ.....
ಮುದ್ದಾಗಿ ಮಾತಾಡಿ ಮರಳು ಮಾಡಿದನವ್ವ ||ಅವ್ವ||

ಚಪ್ಪರ ತೋರಣ ಒಡವೆ ಓಲಗವಿಲ್ಲ
ಮಂಟಪ ಮಂಡಿಗೆ ಧಾರೆ ದಿಬ್ಬಣವಿಲ್ಲ
ಆರತಿ ಎತ್ತಲು ಮುತ್ತೈದೆಯರಿಲ್ಲ
ಮಂತ್ರಗಳಿಲ್ಲ ಶಾಸ್ತ್ರಗಳಿಲ್ಲ.....
ಮಸಣದೊಳಗೆ ಮದುವಣಗಿತ್ತಿ ನಾನಾದೆನವ್ವ.....
ಬೂದಿಬಡುಕನ ಬಾಳ ಬೆಳಗಿದನವ್ವ ||ಅವ್ವ||

ಕದಳಿಯ ಬನದೊಳಗೆ ಕಾದಿಹನವ್ವ.....
ಕಣಗಿಲೆ ಹೂ ಹಾಸಿ ಕಾದಿಹನವ್ವ.....
ಕಣ್ಣ ಬತ್ತಿಯ ಉರಿಸಿ ಕಾದಿಹನವ್ವ.....
ಜನುಮ ಜನುಮದ ಒಲವು ಫಲಗೂಡಿತವ್ವ.....
ಹುಟ್ಟು-ಸಾವಿನಾಚೆಯ ದಡದಿ ಮನೆ ಮಾಡಿಹನವ್ವ
ತಪ್ಪೋ ಒಪ್ಪೋ ಮನ್ನಿಸಿ ಹರಸವ್ವ
ತಪ್ಪೋ ಒಪ್ಪೋ ಹರಸಿ ನೀ ಕಳಿಸವ್ವ. ||ಅವ್ವ||

# ದುಃಖ

ಮುಳ್ಳು ಬಿತ್ತಿದ ಕೈಗೆ ಹೂವು ನೀಡಕ್ಕ.....
ಹಾವು ಹೆಡೆ ಬಿಚ್ಚಿದರೆ ಹಾಲು ನೀಡಕ್ಕ

ಸೀದ ಮಡಿಕೆಗೂ ದುಃಖ ಸುಟ್ಟ ಕಟ್ಟಿಗೆಗೂ ದುಃಖ
ಬೆಂದ ಬೆಳ್ಳಿಯಂತೆ ಬದುಕು ಕಾಣಕ್ಕ..... ||ಮುಳ್ಳು||

ಉದುರಿದ ಎಲೆಗಳಿಗೂ ದುಃಖ ಅದುರಿದ ಭೂಮಿಗೂ ದುಃಖ
ಏರಿಳಿವ ಅಲೆಯಂತೆ ಬದುಕು ಕಾಣಕ್ಕ..... ||ಮುಳ್ಳು||

ಉರಿವ ಬೆಂಕಿಗೂ ದುಃಖ ಹರಿವ ನೀರಿಗೂ ದುಃಖ
ಬೀಸೋ ಗಾಳಿಯಂತೆ ಬದುಕು ಕಾಣಕ್ಕ..... ||ಮುಳ್ಳು||

ಮಿಡಿವ ತಂತಿಗೂ ದುಃಖ ನುಡಿವ ಮುದ್ದಲೆಗೂ ದುಃಖ
ನೇಯೋ ಮಗ್ಗದಂತೆ ಬದುಕು ಕಾಣಕ್ಕ..... ||ಮುಳ್ಳು||

ಬಲೆಯೊಳಗಿದ್ಗರೂ ದುಃಖ ಬಯಲೊಳಗಿದ್ದರೂ ದುಃಖ
ಬೇವಿನ ಕಹಿಯಂತೆ ಬದುಕು ಕಾಣಕ್ಕ..... ||ಮುಳ್ಳು||

ಬಲೆಯೊಳಗಿದ್ದರೂ ದುಃಖ ಬಯಲೊಳಗಿದ್ದರೂ ದುಃಖ
ಬೀಸೋ ಕಲ್ಲಿನ ನಡುವೆ ಬದುಕು ಕಾಣಕ್ಕ..... ||ಮುಳ್ಳು||

## ಬಿಸಿಲು ಕುದುರೆಯನೇರಿ.....

ಬಿಸಿಲು ಕುದುರೆಯನೇರಿ ಹೋಗಬೇಡೋ ಗೆಳೆಯಾ
ಬೆಂಗಾಡಿನಲಿ ಸುತ್ತಿ ಬೆವರ ಸುರಿಸಲು ಬೇಡ
ಬಯಕೆ ಬೆಟ್ಟವ ಹತ್ತಿ ಹೋಗಬೇಡೋ ಗೆಳೆಯಾ
ಬಂಡೆಯಂತೆ ಉರುಳಿ ಬೆರಗಾಗಲು ಬೇಡ ||ಬಿಸಿಲು||

ಬಿಸಿಲು ಮಚ್ಚಿನ ಮೇಲೆ ಬಿರಿದಿರಲು ಬಳಿ ಸೂರ್ಯ
ಕಿಸುರ ಕಣ್ಣ ಒರೆಸಿ ತುಂಬಿಕೊ ಬೆಳಕ ಪೂರ
ಬಿದಿರು ಮೆಳೆಯಲ್ಲಿ ಅಡಗಿಹನು ಪಿಳ್ಳಂಗೋವಿಯ ಒಡೆಯ
ನವಿಲುಗಣ್ಣ ತೆರೆದು ನೋಡೊ ಒಮ್ಮೆ ಗೆಳೆಯಾ ||ಬಿಸಿಲು||

ಬಿದಿರು ಕಡ್ಡಿಯೆ ಬೇರೆ ಬಿಸಿಲು ಕೋಲೆ ಬೇರೆ
ಬಿದಿರು ಕಡ್ಡಿಯೆಂದೇ ಬಗೆದು
ಬಿಸಿಲು ಕೋಲ ನುಡಿಸಲು ಬೇಡ ||ಬಿಸಿಲು||

ಅಂಬರದ ಹಕ್ಕಿಗೆ ಆಕಾಶದಗಲದ ರೆಕ್ಕೆ
ರೆಕ್ಕೆ ಬೀಸಿ ಹಕ್ಕಿ ಮೆರೆದರೂ ಬಾನೊಳಗೆ
ಕಾಳು ಕಡ್ಡಿ ಹೆಕ್ಕಿ ಬೆಚ್ಚನೆ ಗೂಡ ಕಟ್ಟಿ
ಬಣ್ಣದ ಹಾಡ ಹೆಣೆದು ಹಣ್ಣಾಯಿತು ನೆಲದೊಳಗೆ ||ಬಿಸಿಲು||

ಮಿಂಚು ಹುಳುವೆ ಬೇರೆ ಮಿನುಗೊ ಚುಕ್ಕಿಯೆ ಬೇರೆ
ಮಿಂಚು ಹುಳುವೆಂದೆ ಬಗೆದು
ಮಿನುಗೊ ಚುಕ್ಕಿಯ ಹಿಡಿಯಲು ಬೇಡ ||ಬಿಸಿಲು||

ನೀರೊಳಗಿನ ನೈದಿಲೆಗೂ ನೀರಡಿಕೆ ತಪ್ಪಿಲ್ಲ
ಚಿಪ್ಪಿನ ಮುತ್ತಿಗೆ ನತ್ತಾದರೂ ನೆಮ್ಮದಿಯಿಲ್ಲ
ಕಾಲು ಕಂಗಾಲಾದರೂ ಕನಸಿಗೆ ಬರವಿಲ್ಲ
ನಡೆದಷ್ಟು ದಾರಿಯು ನಿಲ್ಲೊ ಮಾತೇ ಇಲ್ಲ ||ಬಿಸಿಲು||

ಒಡಲೊಳಗುರಿದರೂ ಬೆಂಕಿ
ಒಲೆಯೊಳಗುರಿದರೂ ಬೆಂಕಿ
ಬೆಂಕಿಯೊಳಗೆ ಬೆಂದು ಬಯಲು ಕಾಣೊ ಗೆಳೆಯಾ ||ಬಿಸಿಲು||

## ಅರ್ಥವಾಗುತ್ತಿಲ್ಲ

ಹೂವು ಮುಳ್ಳಿನ ಬಗ್ಗೆ
ಮುಳ್ಳು ಹೂವಿನ ಬಗ್ಗೆ
ಏನು ಹೇಳುತ್ತಿದೆಯೋ
ಅರ್ಥವಾಗುತ್ತಿಲ್ಲ.

ಹಗಲು ರಾತ್ರಿಯ ಬಗ್ಗೆ
ರಾತ್ರಿ ಹಗಲಿನ ಬಗ್ಗೆ
ಏನು ಹೇಳುತ್ತಿದೆಯೊ
ಅರ್ಥವಾಗುತ್ತಿಲ್ಲ.

ನಗು ಅಳುವಿನ ಬಗ್ಗೆ
ಅಳು ನಗುವಿನ ಬಗ್ಗೆ
ಏನು ಹೇಳುತ್ತಿದೆಯೊ
ಅರ್ಥವಾಗುತ್ತಿಲ್ಲ.

ಬತ್ತಿ ಬೆಂಕಿಯ ಬಗ್ಗೆ
ಬೆಂಕಿ ಬತ್ತಿಯ ಬಗ್ಗೆ
ಏನು ಹೇಳುತ್ತಿದೆಯೊ
ಅರ್ಥವಾಗುತ್ತಿಲ್ಲ.

ಉದಾಹರಣೆಗೆ
ಸಾಗರ ಸಂಸಾರ
ಬಯಲು ಬೆಳದಿಂಗಳು.

ಇಡಿಯಾಗಿ ಬೆಳದಿಂಗಳನ್ನು
ತುಂಬಿಕೊಂಡ ಕಣ್ಣಿಗೆ
ಹರ್ಷ ಉಲ್ಲಾಸ
ನಿರಂತರ ಮೊರೆತ ಆಲಿಸುತ್ತಿರುವ

ಕಿವಿಗಾದರೋ ಆತಂಕ ದುಃಖ.

ಕಣ್ಣಿಗೆ ಕಿವಿಯ ಭಾಷೆ
ಕಿವಿಗೆ ಕಣ್ಣಿನ ಆಶೆ
ಎಂತು ತಿಳಿಯುವುದೋ.....
ಮೊರೆತ, ಬೆಳದಿಂಗಳು
ಅದೆಂತು ಸೇರುವುದೊ......
ಅರ್ಥವಾಗುತ್ತಿಲ್ಲ.

# ಹೇ ರಾಮ್ !

ಎಲ್ಲ ನೆನಪುಗಳಿಗೆ ವಿರಾಮ
ಹೋಗಿ ಬರುವೆ ರಾಮ
ಇರಿಸುವೆ ನನ್ನೆಸರ
ಉರಿಸಿಕೊ ನಿನ್ನೊಳಗೆ
ಹೋಗಿ ಬರುವೆ ರಾಮ.....

ನಾ ಬಲ್ಲೆ ನಿನ್ನೊಲುಮೆ
ಇತ್ತ ಬಿತ್ತಿ ಬೆಳೆದಿಹ ಪ್ರೇಮ
ಅತ್ತ ಒತ್ತಿ ಸುತ್ತಿಹ ನೇಮ
ಕೊರಗದಿರು ಮರುಗದಿರು
ಹೋಗಿ ಬರುವೆ ರಾಮ.....

ಹಿಂಡನಗಲಿದಾ ಚುಕ್ಕಿ
ಒಂಟಿ ರೆಕ್ಕೆಯ ಹಕ್ಕಿ
ಎಣ್ಣೆ ತೀರಿದ ಬತ್ತಿ
ಹುರಿದುಂಬಿಸಿ ಉರಿಸು
ಹೋಗಿ ಬರುವೆ ರಾಮ.....

ಹಗಲು ಮುಗಿದಾ ಮೇಲೆ
ಕಾರಿರುಳು ಜಗದ ಲೀಲೆ
ಹೊರಡು ಹೊತ್ತಾಯಿತು ಎಂದು
ಹರಸಿ ಕಳಿಸು
ಹೋಗಿ ಬರುವೆ ರಾಮ.....

೨

ಹೊತ್ತಿ ಉರಿಯಿತದು ಉಂಡೆ
ಧಗಧಗ ಧಗಧಗ
ಹಿಮ್ಮೇಳದಲಿ ಗವ್ವಿರುಳ ಚಂಡೆ

ಅಬ್ಬಾ! ಎಷ್ಟಾದರೂ ಗಂಡು ಗಂಡೆ
ಹೋಗುವೆನು ರಾಮ.....

ಅಗಸನ ಕತ್ತೆಗೆ ಸಮವಂತೆ
ಅರಸೊತ್ತಿಗೆಯ ನ್ಯಾಯ
ನಾ ಹೇಳೆ..... ನೀ ಕೇಳೆ.....
ಹೋಗುವೆನು ರಾಮ......

ಗಾಯದ ಮೇಲೆ ಗಾಯ
ಮಾಯದಾ ಗಾಯ
ಕರಗಬಾರದೆ ಕಾಯ?
ಹೋಗುವೆನು ರಾಮ.....

೩.

ನೆನಪುಗಳಿಗೆಲ್ಲಿ ವಿರಾಮ?
ಹೇಗೆ ಹೋಗಲಿ ರಾಮ?
ತುಟಿಯೊತ್ತಿ ನೂರೊಂದು ಮುತ್ತನಿರಿಸಿ
ಹನಿಗಣ್ಣು ಒರೆಸಿ
ಗೋಣಪ್ಪಿ ಮೈದಡವಿ
ಕಣ್ಣೀರ ಕರೆದರೆ ಹೇಗೆ ಹೋಗಲಿ ರಾಮ?

ಮುನ್ನಡೆಸು ಮುನ್ನಡೆಸು
ರಾಮ.....ನನ್ನ ರಾಮ.....
ಸೀತಾರಾಮ.....

# ಮಗು ಚಿತ್ರ ಬರೆಯಿತು

ಮಗು ಚಿತ್ರ ಬರೆಯಿತು
ಬೆರಳುಗಳ ಕೊರಳ ಆಲಿಸಿ
ಗೆರೆಯನೆಳೆಯಿತು.

ಪುಟ್ಟ ಮನೆಯೊಂದ ಕಟ್ಟಿ
ಮನೆಯ ಮುಂದೊಂದು ಮರವ ನೆಟ್ಟು
ರೆಂಬೆ ಕೊಂಬೆಗೆ ಎಲೆಯನಿಟ್ಟು
ಎಲೆಯ ನಡುವೆ ಹೂವನರಳಿಸಿ
ಹೂವಿನ ಜೊತೆಗೆ ಹಣ್ಣನಿರಿಸಿ
ಹಿಗ್ಗಿ ನಲಿಯಿತು.

ಮಗು ಚಿತ್ರ ಬರೆಯಿತು
ಬೆರಳುಗಳ ನಡೆ ನೋಡಿ
ಗೆರೆಯನೆಳೆಯಿತು.

ಮನೆಯ ಹಿಂದೊಂದು ಗುಡ್ಡವ ಕರೆದು
ಗುಡ್ಡದ ಮೇಲೊಬ್ಬ ಸೂರ್ಯನ ಉರಿಸಿ
ಸಾಲಾಗಿ ಹಕ್ಕಿಗಳು ರೆಕ್ಕೆ ಬೀಸಲು
ಬುಡದಲ್ಲೊಂದು ನದಿಯ ಹರಿಸಿ
ನದಿಯಲ್ಲೊಂದು ದೋಣಿಯ ತೇಲಿಸಿ
ಹಿಗ್ಗಿ ನಲಿಯಿತು.

ಮಗು ಚಿತ್ರ ಬರೆಯಿತು
ಬೆರಳುಗಳ ಭಾವ ಭ್ರಮಿಸಿ
ಗೆರೆಯನೆಳೆಯಿತು.

ಗಿರಗಿರ ಬುಗುರಿ ತಿರುಗಿಸಿ
ಹುಲ್ಲುಹಾಸಿನ ಮೇಲೆ

ಗಾಲಿ, ಗೋಲಿಯನುರುಳಿಸಿ
ಕುದುರೆಗೂ ಕೊಂಬು ಮೂಡಿಸಿ
ಮಣ್ಣಿಗೂ ಕಣ್ಣು ಬರೆದು
ಹಿಗ್ಗಿ ನಲಿಯಿತು.

೨
ಅವ್ವ.....
ಘಮ್ಮೆಂದಿದೆ ಹೂ ಮೂಸಿ ನೋಡು
ಸಿಹಿಯಾಗಿದೆ ಮಾವು ಕಿತ್ತುಕೊಡು
ಝುಳಝುಳ ನದಿಯಿದೆ ಹಾಡು
ಸುಡುವುದಿಲ್ಲ ಈ ಸೂರ್ಯ ಮುಟ್ಟಿಬಿಡು
ಎಂದೆಲ್ಲಾ ನುಡಿನುಡಿದು

ಅವ್ವ.....
ಇದು ನಾನು
ಇಗೋ ಇದು ಮನೆಯ ಮುಂದಿನ ದಾರಿ
ಇದು ನನ್ನ ದಾರಿ
ನಾ ನಡೆವ ದಾರಿ ಎಂದೆಲ್ಲಾ ನುಡಿದು
ಪುಟ್ಟಪುಟ್ಟ ಹೆಜ್ಜೆ ಹಾಕಿ
ಹೋದ ಮಗು ಮರಳಲಿಲ್ಲ.....

ನಿಮಿಷಗಳು ವರುಷಗಳು
ಮರಳಲಿಲ್ಲ.

೩
ಕಾದು ಕಾದು ಮರುಗಿದಳಾ ತಾಯಿ
ಕಾದು ಕಾದು ಒರಗಿದಳಾ ತಾಯಿ
ಕಾದು ಕಾದು ಕರಗಿದಳಾ ತಾಯಿ
ಒರಗಿದಲ್ಲೆ ಕರಗಿದರೆ ಅವಳೆಂಥಾ ತಾಯಿ?
ಮತ್ತೆ ಕತ್ತೆತ್ತಿದಳು ಗಿಡವಾಗಿ

ಗಿಡದೊಳಗೆ ಹೂವಾಗಿ
ಹೂವರಳಿ ಪರಿಮಳಿಸಿ
ಗಾಳಿಗುದುರೆಯನೇರಿ ದಿಕ್ಕು ದಿಕ್ಕಿಗೆ ಹಾರಿ
ಹುಡುಕಿದಳಾ ತಾಯಿ-

ಮತ್ತೆ ಕತ್ತೆತ್ತಿದಳು ಗಿಡವಾಗಿ
ಹೂವಾಗಿ, ಹತ್ತಿಯಾಗಿ, ಬತ್ತಿಯಾಗಿ
ಮನೆಮನೆಗೂ ತಿರುಗಿ
ಒಳಗೂ ಹೊರಗೂ ಬೆಳಗಿ
ಹುಡುಕಿದಳಾ ತಾಯಿ.....

ಮಮತೆಯ ಮಗ್ಗದೊಳಗೆ
ಮಗ್ಗುಲಾಗಿ ಮಗ್ಗುಲಾಗಿ
ಹಾಯಿಯಾಗಿ ಹಡಗನೇರಿ
ಯಾವುದೋ ದೇಶದಲ್ಲಿ
ಯಾವುದೋ ವೇಷದಲ್ಲಿ
ಹುಡುಕಿದಳಾ ತಾಯಿ.....

೪

ಅದೊಂದು ದಿನ ಚಿಗುರು ಮೀಸೆಯ
ಹುಡುಗ ಹತ್ತಿದನಾ ಹಡಗ
ಕಂಬಕ್ಕೊರಗಿ ಕಣ್ಮುಚ್ಚಲು
ಯಾವುದೋ ನೆನಪೊಂದಿಗೆ ತೇಲಿ
ಜೋ ಜೋ ಜೋ ಜೋ
ಎಂದು ತೂಗಿತು ಜೋಕಾಲಿ.

ಮೊಗ್ಗಾಯಿತು ಹೀಚಾಯಿತು ಕಾಯಿ
ತೊದಲಿತು ಬೀಜರೂಪಿ ಬಾಯಿ
ಮಾಯಿ! ಮಾಯಿ! ಮಾಯಿ!

ಪಟಗುಟ್ಟಿ ಮುನ್ನಡೆಸಿತು ಹಾಯಿ
ಕೈ ಹಿಡಿದಳು ಕಂದನಾ ತಾಯಿ
ಕೈ ಬೀಸಿ ಕರೆಯಿತು ದಾರಿ
ಅದೇ ದಾರಿ.....
ಚಿತ್ರದೊಳಗಿನ ದಾರಿ.

## ಸೋಲೇ ಇಲ್ಲ !

ಇಲ್ಲ.....ನಾನು ಕಣದಲ್ಲಿಲ್ಲ

ಚಪ್ಪರ ಹಾರ ತುರಾಯಿಗಳೆ
ಚಪ್ಪಾಳೆ ಶಿಳ್ಳೆ ಕೇಕೆಗಳೆ
ನಾನು ಕಣದಲ್ಲಿಲ್ಲ.

ಹೊಗಳಿಕೆಯ ಹೊನ್ನ ಶೂಲಗಳೆ
ಭರವಸೆಯ ಬಿರುಸು ಬಾಣಗಳೆ
ನಾನು ಕಣದಲ್ಲಿಲ್ಲ.

ಎದುರಾಳಿಯ ಇರಿಯಲು
ಸಿದ್ಧವಾಗಿರುವ ಕತ್ತಿಗಳೆ
ನನ್ನನ್ನು ಕಾಪಾಡಲು
ಕಾದಿರುವ ಗುರಾಣಿಗಳೆ
ನಾನು ಕಣದಲ್ಲಿಲ್ಲ.

ಗೆಲುವಿನ ಗೌರಿಶಂಕರನೆ ಹೇಳು-
ನಿನ್ನ ಮೆಟ್ಟಿದವರು
ಮುಟ್ಟಿದರೇನು ಆಕಾಶ?

ಗೆಲುವಿನ ಗಾಳಿಪಟವೇ ಹೇಳು-
ಎಷ್ಟು ನಿಮಿಷ?
ಈ ಹರುಷ? ಈ ಹಾರಾಟ?

ಪಾತರಗಿತ್ತಿಯೇ ಪದ್ಮಪತ್ರವೇ
ಎಂಥಾ ಓಟ? ಎಂಥಾ ನೋಟ!
ಕಲಿಸಿದಿರಿ ಪಾಠ ನಮಸ್ಕಾರ.

ಇಲ್ಲ.....
ಕಾಲುಗಳಿಗೆ ಬಲವಿಲ್ಲ
ಕೈಗಳು ಸಹಕರಿಸುತ್ತಿಲ್ಲ
ಕಣ್ಣು, ಮೂಗು, ಕಿವಿ, ತುಟಿ
ಯಾವುದೂ ಹಿಂದಿನಂತಿಲ್ಲ.

ಮಿದುಳ ಮರದೊಳಗೆ
ಮರದ ಮರೆಯೊಳಗೆ
ಮೂಡಿಹನು ಚಂದಿರ
ಬೆಳದಿಂಗಳು
ಬಯಲು ಮಾಡಿದೆ-
ಗೆಲ್ಲ ಬಯಸದವನಿಗೆ
ಸೋಲೆ ಇಲ್ಲ!

## ಯಾಕೆ ?

ಝುಮು ಝುಮು ಗಾಳಿ ಬೀಸಿತು
ಝುಳ ಝುಳ ನದಿ ಹರಿಯಿತು
ತೊಟ ತೊಟ ಹನಿ ಉದುರಿತು
ಮಿಣ ಮಿಣ ತಾರೆ ಮಿನುಗಿತು.

ಏಯ್! ಯಾರಲ್ಲಿ?
ಇದೆಲ್ಲಾ ಯಾಕೆ ನಡೆಯುತಿದೆ ಇಲ್ಲಿ?

ಘಮ ಘಮ ಹೂ ಪರಿಮಳಿಸಿತು
ಧಗ ಧಗ ಬೆಂಕಿ ಉರಿಯಿತು
ಪಟ ಪಟ ರೆಕ್ಕೆ ಬೀಸಿತು
.....ಹಕ್ಕಿ ಹಾರಿತು .

ಏಯ್! ಯಾರಲ್ಲಿ?
ಇದೆಲ್ಲಾ ಯಾಕೆ ನಡೆಯುತಿದೆ ಇಲ್ಲಿ ?!

ಯಾಕೆ? ಯಾಕೆ?

ದೂರದಲ್ಲಿದ್ದ ಬೆಟ್ಟ ಕಿವಿಗೊಟ್ಟು
ಮಾರುತ್ತರ ನೀಡಿತು;

ಯಾಕೆ...ಯಾಕೆ...ಕೆ...ಕೆ...ಕೆ

# ಹೊಳೆ ಮಗಳು (೧೯೯೬)

ಅಕ್ಕರೆಯ ಗೆಳತಿಯರಾದ
ಶ್ರೀದೇವಿ-ಪದ್ಮಾಕ್ಷಿ
ಗೀತಾ ಧರ್ಮಟ್ಟಿ
ಇವರಿಗೆ

## ಹೊಳೆ ಮಗಳು

ಅವಳು ಹಳ್ಳ
ಇವಳು ಹೊಳೆ

ಹಳ್ಳದ ಬಳ್ಳಿಯಲಿ
ಹರಿದು ಬಂದವಳು
ಹೊಳೆ ಮಗಳು

ತಾಯಿ-
ಹೊಳೆ ಮಗಳ ಹುಬ್ಬನು ತೀಡುವಳು
ಸುಳಿ ಮುಂಗುರುಳ ಬಾಚುವಳು
ದಿಟ್ಟಿಯ ಬೊಟ್ಟಿಟ್ಟು
ಅಕ್ಕರೆಯ ಮುತ್ತಿಟ್ಟು
ಮುನ್ನಡೆಸುವಳು

ಇದು ಬೆಟ್ಟ ಇದು ಗಾಳಿ
ಇದು ಹೂವು ಇದು ಎಲೆ
ಎಂದು ಮಗಳಿಗೆ
ಪರಿಚಯಿಸುವಳು

ಮಗಳು-
ಕಲಿಯುವಳು
ಗಿಡ ಮರಗಳ ಅಡಿಯಲಿ ಬಾಗಿ
ಕಣಿವೆ ಕೊರಕಲು ಬಂಡೆ
ಹಾದಿಯಲಿ ಬಳುಕಿ ಸಾಗುವಳು

ಅವ್ವನಿಗೆ ತೋರುವಳು
ಸಂಭ್ರಮಿಸಿ ಹೇಳುವಳು
ನಕ್ಷತ್ರ ಗಣವಿರುವುದು

ನನ್ನೊಳಗೆ
ಚಂದಿರನಿರುವನು ತಳಗೆ

ತಾಯಿ ನಸುನಕ್ಕು-
ಸಣ್ಣನೆಯ ದನಿಯವಳೆ
ನುಣ್ಣನೆಯ ನಡೆಯವಳೆ
ನನ್ನ ಕರುಳಿನ ಕುಡಿಯೆ
ನನ್ನ ಆಶೆಯ ಕಿಡಿಯೆ
ಎಂದು ಮಗಳ ಮುದ್ದಾಡುವಳು

ತಾಯಿ ಎಚ್ಚರಿಸುವಳು :
ಚಿಣ್ಣರನು ಮುಳುಗಿಸದಿರು
ಮೀನುಗಳ ಒಣಗಿಸದಿರು
ಕಲ್ಲುಗಳ ಮಿದುಗೊಳಿಸಿ
ಸಹನೆಯಲಿ ನೀರುಣಿಸಿ
ಹರಿವ ಹಾದಿಯಲ್ಲೆಲ್ಲ
ಜೀವ ದೀಪವನುರಿಸು

ವಿಷಕಂಠನನುಸರಿಸಿ
ಕೊಳೆ ಕಳಂಕವ ಧರಿಸಿ
ಕಾಳಿಯಾವೇಶವ ತಾಳಿ
ಕೇಡಿನೆದೆಗೂಡ ಸೆಳೆದು
ಮಡುವಿನಲಿ ಮುಳುಗಿಸು

ಸೂರ್ಯನ ಕರುಣೆ
ನೆಲದ ಋಣ
ತಾಯ ಹರಕೆ
ಕೊನೆವರೆಗೆ ಕಾಯುವುದು

ತಾಯಿ
ನಿಂತಲ್ಲೆ ನಿಲ್ಲುವಳು
ತಪಸ್ವಿನಿ
'ತಾವರೆ' ಈಗವಳು

ಹಳ್ಳದ ಬಳ್ಳಿಯನು ಕಡಿದು
ಕಣ್ಣೀರ ತಡೆ ತಡೆದು
ಮುಂದೆ ಸಾಗುವಳು
ಹಿಂದೆ ನೋಡುವಳು
ಹೊಳೆ ಮಗಳು........

## ಕಾಡಿನಲ್ಲಿ.....

ಇಲ್ಲಿ ಬಯಸಿದಂತೆ
ಬದುಕಬಹುದು
ಇಚ್ಛೆಯಂತೆ ಸಾಯಬಹುದು

ಸುತ್ತಲೂ ಮರಗಳು
ಮರದೊಳಗೆ ಕಿಕ್ಕಿರಿದು
ಪರಿಮಳಿಸಿವೆ ಹೂವುಗಳು

ಜಿಂಕೆ ಆನೆ ಹುಲಿಗಳು
ನೋಡಿಯೂ ನೋಡದಂತೆ
ತಮ್ಮ ಪಾಡಿಗೆ ತಾವು
ಹೆಜ್ಜೆಗಳನೂರಿ ಸಾಗಿಹವು

ಹಕ್ಕಿಗಳು ಆಗಾಗ್ಗೆ ಹಾಡಿ
ಗಮನ ಸೆಳೆಯುವವು
ನವಿಲು ನನಗೆಂದೇ
ಗರಿಯೊಂದನು ಉದುರಿಸಿಹುದು

ತಂಗಾಳಿ ಸುಳಿಸುಳಿದು
ಚಿಂತೆಗಳನೆತ್ತಿ ಕೊಂಡೊಯ್ಯುವುದು
ಮಲಗು ಮಲಗೆಂದು
ಮೆಲ್ಲನೆ ಪಿಸು ನುಡಿಯಾಡುವುದು

ಹೊಯ್!
ಕಷ್ಟಗಳೇ ಕಾಡು ಸುತ್ತಲು ಹೋಗಿ
ಕ್ಲೇಶಗಳೇ ಎಲೆಗಳನೆಣಿಸಲು ಶುರು ಮಾಡಿ......

ಅಲ್ಲ.....ಎಲ್ಲಾದರೂ
ಕಾಡು ಸುತ್ತಿ ಮರಳುವುದುಂಟೆ?
ಹೋಗಲಿ.....
ಎಲೆಗಳನೆಣಿಸಿ ಮುಗಿಸಿದವರುಂಟೆ?

ಈಗ ಇಲ್ಲಿ
ಬಯಸಿದಂತೆ ಸಾಯಬಹುದು
ಇಚ್ಛೆಯಂತೆ ಬದುಕಬಹುದು

# ಹಳ್ಳಿಯ ದಾರಿ

ಅರವತ್ತರ ಮುದುಕ
ಹತ್ತರ ಹುಡುಗಿ
ಇಬ್ಬರೂ ಸೇರಿ
ಸವೆಸಿದರು ದಾರಿ

ಮುಂದೆ ಮುಂದೆ
ಸಾಗಿದ ಮುದುಕ
ಹಿಂದೆ ಹಿಂದೆಯೆ
ಉಳಿದಳು ಹುಡುಗಿ

ಮುದುಕನಿಗದು
ನಿತ್ಯದ ದಾರಿ
ನೋಡಲೇನಿದೆ?

ಹುಡುಗಿಗೆ
ಪ್ರತಿಯೊಂದು ಹೊಸದು
ಬಿಟ್ಟರೆ ಸಿಗುವದೆ?

ಹುಡುಗಿ ಹಳ್ಳದಲಿ
ಕಾಲು ನೀಡಿದಳು
ಚೆಲ್ಲಿದ ಹೂವು
ಎತ್ತಿಕೊಂಡಳು
ಹೊಂಗೆಯ ನೆರಳಲ್ಲಿ
ಕೂತು ಹಕ್ಕಿಯ
ಹಾಡನನುಕರಸಿದಳು

ಮುಗಿಯುವುದೆ ದಾರಿ?

ಮುದುಕ ಕಳವಳಿಸಿದ.
ಮುಗಿಯದಿರಲಿ ದಾರಿ:
ಹುಡುಗಿ ಹಂಬಲಿಸಿದಳು

ಮುಂದೆ ಮುಂದೆ
ಸಾಗಿದ ಮುದುಕ
ಹುಡುಗಿಯ ಸಂಭ್ರಮಕೆ
ಕಾರಣವ ಊಹಿಸುತ

ಹಿಂದೆ ಹಿಂದೆಯೆ
ಉಳಿದಳು ಹುಡುಗಿ,
ಹಾವಿನ ಪೊರೆ
ನವಿಲು ಗರಿ
ಹುಡುಕುತ.

## ಹಪ್ಪಳದ ಕತೆ

ಉಕ್ಕರಿಸಿದೆ
ಹಿಟ್ಟು
ಮಿದುವಾಯಿತು
ಚೆನ್ನಾಗಿ ನಾದು
ಲಟ್ಟಿಸಿದೆ
ಹಪ್ಪಳವಾಯಿತು

ಲಟ್ಟಿಸಿದಂತೆ
ದಿಟ್ಟಿಸುತ
ತನಗೆ ತಾನೆ ಎಂಬಂತೆ
ಎಲ್ಲಿಂದ ಬಂದೆ?
ಎಂದು ಹಪ್ಪಳವೆ ಕೇಳಿತು

ಬೀಜ, ಸಸಿ, ತೆನೆ
ಕಾಳು, ಬೇಳೆ
ಬೆವರು ಹಸಿವು
ನೀರು ನೆಲ ಭೂಮಂಡಲ
ಉಂಡೆ ಉಂಡೆಯಾಗಿ
ಹಪ್ಪಳವೆ ತಾನಾಗಿ
ಕತೆ ಸಾಗಿತು

ಸೂರ್ಯ ಬೆಳಕು ಹಾಯಿಸಿ
ಹಪ್ಪಳವನ್ನೂ ನನ್ನನ್ನೂ
ಹದವಾಗಿ ಒಣಗಿಸಿದ

ಮಾತಾಡದೆ ಮುನ್ನಡೆದ
ಕಣ್ಣೆದುರೆ ಕರಗಿದ.

## ಪುಟ್ಟಿ ಕೆಂಚವ್ವ

ಹೊತ್ತಾರೆ ಸೂರ್ಯನ ಕಿರಣಗಳು ಮುತ್ತಿಡಲು
ಹಾಳು ಹಕ್ಕಿಯ ಹಾಡು ಕಿವಿ ತುಂಬಲು
ಕಿಸುರುಗಣ್ಣನು ತೆರೆದು ಸೆಟೆದ ಹೂ-ಮೈಯ ಮುರಿದು
ಆಕಳಿಸುವಳು ನಮ್ಮ ಪುಟ್ಟಿ ಕೆಂಚವ್ವ.....

ಚೂರು ಅಂಗಳವನೆ ಪರಪರ ಕೆರೆದು
ಒಡೆದ ಗಡಿಗೆಯ ಸೊಂಟಕ್ಕೆ ಕರೆದು
ಊರ ಗಟ್ಟಿಗಿತ್ತಿಯರೊಡನೆ ಗುದ್ದಾಡಿ
ನೀರು ತರುವಳು ನಮ್ಮ ಪುಟ್ಟಿ ಕೆಂಚವ್ವ.....

ಕರವೀರದ ಕೊಂಬೆಗಳ ಕಡಿದು
ಒಣಗಿದ ರೆಂಬೆಗಳನು ಬಡಿದು
ಕಡ್ಡಿ-ಪುರಳೆಯ ಒಟ್ಟಿಗೆ ಒಗೆದು
ಬೆಂಕಿ ಉರಿಸುವಳು ನಮ್ಮ ಪುಟ್ಟಿ ಕೆಂಚವ್ವ.....

ಚಟಾಕು ಹಾಲಿಗೆ ಚಿಟಿಕೆ ಪುಡಿಯನು ಬೆರೆಸಿ
ಪಾವು ನೀರನೆ ಸುರಿದು
ಘಮ್ಮೆನ್ನುವ ಹಾಗೆ ಟೀ ಕುದಿಸುವಳು
ಮಾಯಾವಿ ಹುಡುಗಿ ನಮ್ಮ ಪುಟ್ಟಿ ಕೆಂಚವ್ವ.....

ಹೊಲದಲ್ಲಿ ಸಂಜೆಯ ತನಕ ದುಡಿದು
ಅಕ್ಕಿ-ಮೆಣಸಿನಕಾಯಿ ಪಡೆದು
ತಮ್ಮನ ಬಾಯ ಚಪಲಕ್ಕೆ ಉದ್ದು-ಕಡಲೆಯ
ಕದ್ದು ತರುವಳು ನಮ್ಮ ಪುಟ್ಟಿ ಕೆಂಚವ್ವ.....

ದಾರಿಯಲಿ ಅಂತರಗಟ್ಟಮ್ಮನಿಗೆ ಕೈ ಮುಗಿವಳು
ಹೊಟ್ಟೆ, ಬಟ್ಟೆಗಿಟ್ಟು, ಮಡುಗು ಎಂದು ಬೇಡುವಳು

ಹಕ್ಕಿ ಗೂಡಿಗೆ ಮರಳುವಂತೆ
ಗುಡಲಿಗೆ ಮರಳುವಳು ನಮ್ಮ ಪುಟ್ಟ ಕೆಂಚವ್ವ.....

ಸೋರುವ ಬುಡ್ಡಿಯನೂ ಒಲಿಸಿ ಉರಿಸುವಳು
ಪಾವಕ್ಕಿಯಲಿ ತಂಗಿ ತಮ್ಮನ ಹೊಟ್ಟೆ ತೂಗಿಸುವಳು
ಹರಿದ ಹಚ್ಚಡವನೆ ಸಮನಾಗಿ ಎಲ್ಲರಿಗೆ ಹೊದಿಸಿ
ಕೈ ಚಳಕ ಮೆರೆವಳು ನಮ್ಮ ಪುಟ್ಟ ಕೆಂಚವ್ವ.....

ಅಪ್ಪನ ಕುಡಿತ-ಜೂಜಿಗೆ ಬೆದರುವಳು
ಅವ್ವನ ದಮ್ಮು-ಗೂರಲಿಗೆ ನೋಯುವಳು
ಸಿಟ್ಟಿನಲಿ ಕಟ್ಟಿರುವೆ, ಚಿಟ್ಟೆ ನಗೆಯವಳು
ದಿಟ್ಟ ನಡೆಯವಳು ನಮ್ಮ ಪುಟ್ಟ ಕೆಂಚವ್ವ.....

ಹೂವಿನ ವಾಸನೆ ಹಿಡಿದು ಹೆಸರು ಹೇಳುವಳು
ಹಕ್ಕಿಯ ಕೂಗನಳೆದು ಅಣಕಿಸುವಳು
ಎರೆಮಣ್ಣನು ಕಲಸಿ ಬೊಂಬೆಯ ಮಾಡುವಳು
ಬೊಂಬೆಗೂ ಜೀವ ಕೊಡುವಳು ನಮ್ಮ ಪುಟ್ಟ ಕೆಂಚವ್ವ.....

ಹುಲಿಯನಿಗೆ ಹಳ್ಳದಲಿ ಮಜ್ಜನ ಮಾಡಿಸುವಳು
ಭೂತಾಯಿ ಮೀನ ಕಿರುಬೆರಳಲಿ ಕುಣಿಸುವಳು
ಗಟ್ಟಿ ಗುಂಡಿಗೆಯವಳು ಕಾಳವ್ವನ
'ಕಿಡಿ' ಇವಳು ನಮ್ಮ ಪುಟ್ಟ ಕೆಂಚವ್ವ.....

## ಹಾಡೆ ಹನುಮವ್ವಾ...

ಹಾಡೆ ಹನುಮವ್ವಾ...
ಕತ್ತಲ ಒಳಗೆ ಕರಗಿದೆ ಕೋಗಿಲೆ
ಬೆಳಕಿಗೆ ತಾರವ್ವ

ಹಳ್ಳಾಕೊಳ್ಳಾ
ಹರಿಯೊ ಹಾಗೆ
ಮಾವು ಬೇವೂ
ಚಿಗಿಯೊ ಹಾಗೆ
ರಂಜ ಸುರಗಿ
ಉದುರೊ ಹಾಗೆ
ಜಾಜಿ ಮಲ್ಲಿಗೆ
ಬಿರಿಯೊ ಹಾಗೆ
ಹಾಡೆ ಹನುಮವ್ವಾ...

ಕಾಳಿಯ ಕೆಚ್ಚಲು
ತುಂಬೊ ಹಾಗೆ
ಪಾತರಗಿತ್ತಿ ಕುಣಿಯೊ ಹಾಗೆ
ಆಡೋ ನವಿಲು
ನಲಿಯೊ ಹಾಗೆ
ಹಕ್ಕಿಚುಕ್ಕಿ
ಮರಳೊ ಹಾಗೆ
ಹಗಲು ರಾತ್ರಿ
ಉರುಳೊ ಹಾಗೆ
ಹಾಡೆ ಹನುಮವ್ವಾ...

ಸಾಲದ ಬಡ್ಡಿ
ಸೊರಗೊ ಹಾಗೆ
ಕಾಳು ಬೇಳೆ
ಸುರಿಯೊ ಹಾಗೆ

---

ಕಟ್ಟಿಗೆ-ಕೆಂಡ
ಉರಿಯೊ ಹಾಗೆ
ನೀರೂ-ಸಾರೂ
ಕುದಿಯೊ ಹಾಗೆ
ಹಸಿವು ದಾಹ
ನೀಗೋ ಹಾಗೆ
ಹಾಡೆ ಹನುಮವ್ವಾ...

ಕಾಸಿನ ಕಾಲು
ನಡುಗೊ ಹಾಗೆ
ಗರುವದ ಗೋಣು
ಮುರಿಯೊ ಹಾಗೆ
ಸೇಡು-ಕೇಡು
ಕರಗೊ ಹಾಗೆ
ಬೇನೆ ಬೇಸರ
ಕಳೆಯೊ ಹಾಗೆ
ಮೇಲು-ಕೀಳೂ
ಅಳಿಯೊ ಹಾಗೆ
ಹಾಡೆ ಹನುಮವ್ವಾ...

ಪ್ರೇಮ-ಕರುಣೆ
ಉಕ್ಕೋ ಹಾಗೆ
ಕನಸೊ ಕಣ್ಣು
ತೆರೆಯೊ ಹಾಗೆ
ದೇಹ-ಜೀವ
ಮಾಗೊ-ಹಾಗೆ
ಮುಕ್ಕಣ್ಣನಿಗೆ
ಮುಟ್ಟೋ ಹಾಗೆ
ಹಾಡೆ ಹನುಮವ್ವಾ...

ಹಾಡ ಕೇಳಿ ಕಣ್ಣಾ ಮುಚ್ಚುವೆ
ಹಾಡಿನ ಹುಚ್ಚವ್ವಾ...

## ಚೆಲುವ ನಾರಾಯಣ

ಧೂಪ-ದೀಪದಲ್ಲಿದ್ದ
ಹೂವು-ಗಂಧದಲ್ಲಿದ್ದ
ಚೆಲುವ ನಾರಾಯಣ

ಕರ್ಪೂರದಾರತಿಯಲ್ಲಿದ್ದ
ಕುಂಕುಮದಕ್ಷತೆಯಲ್ಲಿದ್ದ
ಚೆಲುವ ನಾರಾಯಣ

ಗಂಟೆ ಜಾಗಟೆಯಲ್ಲಿದ್ದ
ಮಂತ್ರ ಘೋಷದಲ್ಲಿದ್ದ
ಚೆಲುವ ನಾರಾಯಣ

ನಿತ್ಯ ಪೂಜೆಯಲ್ಲಿದ್ದ
ಹೊತ್ತ ಹರಕೆಯಲ್ಲಿದ್ದ
ಚೆಲುವ ನಾರಾಯಣ

ಮುದ್ದನುಕ್ಕಿಸುತ್ತಿದ್ದ
ನೆಟ್ಟಗೆ ದಿಟ್ಟಿಸುತ್ತಿದ್ದ
ಮರುಳಾಗದವರುಂಟೆ,
ಚೆಲುವ ನಾರಾಯಣ?

ಮುದ್ದು ಮುಖವನೆ
ನೆನೆದು
ಗಂಡನ ನೆನಪನೆ
ತೊರೆದು
ಕರೆಯಬಹುದೆ
ಚೆಲುವ ನಾರಾಯಣ?

ಮುದ್ದು ಮಗುವಿನ ತಾಯಿ
ಮನಸು
ತತ್ತರಿಸುವ ಹಾಯಿ
ಕರೆಯಬಹುದೆ
ಚೆಲುವ ನಾರಾಯಣ?

ಬಂಧುವನೆ ಬದಿಗಿರಿಸಿ
ಊರ ಮಂದಿಯನೂ
ಕಡೆಗಣಿಸಿ
ಕರೆಯಬಹುದೆ
ಚೆಲುವ ನಾರಾಯಣ?

ಯಾಕೆಂದು ತಿಳಿಯದು
ಏನೊಂದು ಹೊಳೆಯದು
ಒಲವಿನಾವೇಶ!
ವಿವಶಳಾದಳೆ ಅವಳು
ಚೆಲುವ ನಾರಾಯಣ?

ಹೊರಗೇನೂ ಕಾಣಿಸದು
ಒಳಗೇನೊ ಅನಿಸುವುದು
ಅದಕೂ ಅವನೆ ಕಾರಣ
ಚೆಲುವ ನಾರಾಯಣ

ನೆಮ್ಮಿ ನಲುಗಿರಬಹುದು
ಒಲಿದು ಕೆಟ್ಟವರುಂಟೆ?
ಒಲುಮೆ ಇಲ್ಲದಿರೆ
ಅವನ ಮುಟ್ಟುವುದುಂಟೆ?
ಎಂಟೆದೆಯ ತುಂಟನೆ
ಚೆಲುವ ನಾರಾಯಣ...

# ಮೊಟ್ಟೆ

ಪಂಚೇಂದ್ರಿಯಗಳಿಗೆ ಒಲಿದು ಅವು ಹೇಳಿದ ಹಾಗೆ ನಲಿದು
ಕುಣಿ ಅಂದರೆ ಕುಣಿದು ಕಾಡಿ ಬೇಡಿ ಪಡೆದೆ
ಮಿರಿಮಿರಿ ಮಿಂಚೊ ಮೊಟ್ಟೆ, ಕಿಚ್ಚಾ ಹಚ್ಚೊ ಮೊಟ್ಟೆ

ಕಳ್ಳುಬಳ್ಳಿಯಾ ಹಂಗಿಲ್ಲದಾ ಮೊಟ್ಟೆ, ನಿಲುವು ನಡೆಯಿಲ್ಲದಾ ಮೊಟ್ಟೆ
ಒತ್ತಿದರೂ ಒಡೆಯದೆ ಕುಟ್ಟಿದರೂ ಸಿಡಿಯದೆ
ಮಂಕುಬೂದಿಯನೆರಚಿ ಮಿಕನನ್ನಾಗಿಸಿ ಮಣಿಸಿ
ಬೆರಕಿ ಗುಣವ ಕಲಿಸಿ ನಕ್ಕಿತವ್ವಾ ಮೊಟ್ಟೆ
ಮಿರ್ರನೆ ಮಿಂಚೊ ಮೊಟ್ಟೆ, ಮಾಯಾ ನಗರಿಯ ಮೊಟ್ಟೆ

ಕಣ್ಣಲಿ ಹಳ್ಳವ ಅಗೆದು ಮೂಗಿಗೆ ದಾರವ ಬಿಗಿದು
ಕಿವಿಯಾ ಕಚ್ಚಿ ನಾಲಗೆ ಚುಚ್ಚಿ ಬಾಯ ಮುಚ್ಚಿ
ದೆಯ್ಯ ಮೆಟ್ಟಿದ ಹಾಗೆ ಮೈಯಾ ಮೆಟ್ಟಿಕೊಂಡು
ಬದುಕಾ ನರಕಾ ಮಾಡಿ ಸೊಕ್ಕಿತವ್ವಾ ಮೊಟ್ಟೆ
ಮಿರಿಮಿರಿ ಮಿಂಚೊ ಮೊಟ್ಟೆ, ತಿಳಿವನು ತಿರುಚೊ ಮೊಟ್ಟೆ

ಕೊಡವಿದ್ದಕ್ಕೇ ಹೊರಳಿ ಕೆಡವಿದಕ್ಕೇ ಕೆರಳಿ
ಛಂಗನೆ ಮೇಲೆ ನೆಗೆದು ನೆತ್ತಿಯ ಮೇಲೆ ಕುಣಿದು
ಸರಸರ ಒಳಗೆ ಇಳಿದು ಬತ್ತಿಯ ಹಾಗೆ ಉರಿದು
ಸುಡುಸುಡು ಅಂತು ಮೊಟ್ಟೆ, ಸುಟ್ಟಿತವ್ವಾ ಹೊಟ್ಟೆ
ಮಿರ್ರನೆ ಮಿಂಚೊ ಮೊಟ್ಟೆ, ನಂಜನು ಉಣಿಸೊ ಮೊಟ್ಟೆ

ಮಾಟವ ಮಾಡಿದೆ ಮಂತ್ರವ ಹಾಕಿದೆ
ಹರಕೆಯ ಹೊತ್ತು ಮುಡಿಪನು ಕಟ್ಟಿದೆ
ಹೋದೆ... ಹೋದೆ... ಅಂದು, ಒಮ್ಮೆಗೆ ಒಳಗೇ ಬಂದು
ಮುಳ್ಳಿನ ಹಾಗೆ ಮೊನೆದೂ, ನಟ್ಟಿತವ್ವಾ ಮೊಟ್ಟೆ
ಮಿರಿಮಿರಿ ಮಿಂಚೊ ಮೊಟ್ಟೆ, ಮೂಜಗ ಮುಕ್ಕಿದ ಮೊಟ್ಟೆ

ಕೆಟ್ಟೇ ಅನಿಸಿತು ಬಿಡುಗಡೆ ಬಯಸಿತು
ಹೃದಯವು ಕಲಿಸಿತು ಅರಿವದು ಉಳಿಸಿತು
ಧೂಪಾ ಹಚ್ಚಿ ದೀಪಾ ಬೆಳಗಿ ಹೂಗಳನೇರಿಸಿ
ತಟ್ಟೆಯಲ್ಲಿಟ್ಟು ಶಿವನಿಗೆ ಕೊಟ್ಟೆ
ಗಲ್ಲವ ಬಡಿದು ಬೆಲ್ಲದ ಮಾತಲಿ ಮೊರೆಯನು ಇಟ್ಟೆ

ಎಲ್ಲೇ ಹುಡುಗಿ ಮೊಟ್ಟೆ? ಎಲ್ಲೇ ಹುಡುಗಿ ಮೊಟ್ಟೆ?
ನನಗೆ ನಾನೆ ಕೇಳುವೆ, ನನಗೆ ನಾನೆ ಹೇಳುವೆ
ಮುಕ್ಕಣ್ಣನಿಗೆ ಕೊಟ್ಟು ಕೈಯ ಮುಗಿದು ಬಿಟ್ಟೆ.

# ಬೆರಳು

ಮೊಗ್ಗಿನ ಹಾಗೆ ಬಾಲ್ಯದ ಬೆರಳು
ಮದಗಜದಂತೆ ಮಧ್ಯದ ಬೆರಳು
ಮಾಗಿತು ಬಾಗಿತು ಮುಪ್ಪಿನ ಬೆರಳು
ಯಾವುದು ಹಿರಿದು? ಯಾವುದು ಕಿರಿದು?
ಹುಟ್ಟಿನ ಬೆರಳು? ಸಾವಿನ ಬೆರಳು?

ಕಣ್ಣನು ಉರಿಸಿತು ಬೆಂಕಿಯ ಬೆರಳು
ಮೂಗನು ಇರಿಸಿತು ಗಾಳಿಯ ಬೆರಳು
ತುಟಿಯನು ತಿದ್ದಿತು ನೀರಿನ ಬೆರಳು
ಕಿವಿ ನಾಲಗೆಯನು ನಭದಾ ಬೆರಳು
ಮೈಯ ಮೂಡಿಸಿತು ಭೂಮಿಯ ಬೆರಳು

ಮೋಹ ಮದ ಮತ್ಸರಗಳನೂ
ಪ್ರೀತಿ ಕರುಣೆ ಕಾಮನೆಗಳನೂ
ಸಂಚು ವಂಚನೆ ಛಲ ಬಲಗಳನೂ
ಹಿಡಿಹಿಡಿ ಅಂದಿತು ಮಾಯೆಯ ಬೆರಳು

ಚಿಮ್ಮಿತು ಚಾಚಿತು ಚಲಿಸಿತು
ಬೀಜದ ಬೆರಳು
ತತ್ತಿಯನಪ್ಪಿತು ತುತ್ತನು ಉಣಿಸಿತು
ತಟ್ಟಿ ಮಲಗಿಸಿತು ತಾಯಿಯ ಬೆರಳು

ಚಂದ್ರನ ಕರೆಯಿತು ಚಪ್ಪಾಳೆ ತಟ್ಟಿತು
ತುತ್ತೂರಿ ಹಿಡಿಯಿತು ಪುಟವದು ತೆರೆಯಿತು
ಚಿತ್ರವ ಬರೆಯಿತು ಮಗುವಿನ ಬೆರಳು

ಮಲ್ಲನ ಮಣಿಸಿತು ಮಲ್ಲಿಗೆ ಮುಡಿಸಿತು
ಕೆನ್ನೆಯ ಸವರಿತು ಕಣ್ಣೀರ ಒರೆಸಿತು
ಕನಸನು ಹೆಣೆಯಿತು ಕವಿತೆಯ ಬರೆಯಿತು
ಬಿನ್ನಾಣ ಮಾಡಿತು ಪ್ರೇಮಿಯ ಬೆರಳು

ಕೋವಿಯ ಹಿಡಿಯಿತು ಮದ್ದನು ಸಿಡಿಸಿತು
ತಕ್ಕಡಿ ಹಿಡಿಯಿತು ತಿಜೋರಿ ತುಂಬಿತು
ಮಕುಟವ ಕಸಿಯಿತು ಮರಳನು ಅಳೆಯಿತು
ಯೌವನದರಳನು ಹುರಿಯಿತು ಬೆರಳು

ಮಣಿಯನು ಎಣಿಸಿತು ಕಪ್ಪುರ ಹಿಡಿಯಿತು
ತಾಳವ ಹಾಕಿತು ತಂತಿಯ ಮೀಟಿತು
ಗೀತೆಯ ನುಡಿಸಿತು ಧೂಪವ ಹಚ್ಚಿತು
ನಡುಗಿತು ನರಳಿತು ಮಾಗಿಯ ಬೆರಳು

ಹುಟ್ಟದು ಸವೆಯಿತು ಹಾಯಿಯು ಹರಿಯಿತು
ಹತ್ತೂ ದಿಕ್ಕಿಗೆ ಬೊಂಬಿನ ನೆರಳು
ಕಾಣದ ಬೆರಳೊಂದು ಕೊಳಲನು ನುಡಿಸಿತು
ಹಂಸೆಯ ಹಿಡಿದೆತ್ತಿ ಗಗನಕೆ ಚಿಮ್ಮಿತು
ಝುಗ್ಗೆಂದು ಹೊಳೆಯಿತು ಮಿಂಚಿನ ಬೆರಳು.

## ತುತ್ತು ಮತ್ತು ತುತ್ತೂರಿ

ತುತ್ತು ಉಣ್ಣುವ ಬಾಯೆ
ತುತ್ತು ಉಣಿಸುವ ತಾಯೆ
ಏನೀ ಜಗದ ಮಾಯೆ?

ಒಲೆಯ ಉರಿಸುವ ತಾಯೆ
ಎಲ್ಲವ್ವ ಹಾಲಕ್ಕಿ ಬೇಯಿಸಿದ ಮಡಕೆ?
ಯಾಕವ್ವ ಇಷ್ಟೊಂದು ಹಸಿವು ಬಾಯಾರಿಕೆ?
ಯಾಕವ್ವ ಬೆಂದ ಕಾಳಿಗೂ ಮೊಳಕೆ?

ತುತ್ತೂರಿ ಊದುವ ಬಾಯೆ
ತುತ್ತೂರಿ ಕೈಗಿತ್ತ ತಾಯೆ
ಏನೀ ಜಗದ ಮಾಯೆ?

ಒಲವ ಹರಿಸುವ ತಾಯೆ
ಯಾಕವ್ವಾ ಅಂಕೆಯನೂ ಮೀರಿ
ಬಿರಿಯುವದು ಮಲ್ಲಿಗೆ?
ಯಾಕವ್ವ ಕನಲುವುದು ಕತ್ತರಿಸಿದರೆ ರೆಕ್ಕೆ?
ಯಾಕವ್ವ ಅಂಜುವುದು ಮೂಜಗವು ಅಂಕುಶಕೆ?

ತುತ್ತೆನ್ನ ತೊತ್ತಾಗಿಸುವ ಮುನ್ನ
ತುತ್ತಿಗೆ ತುತ್ತಾಗುವ ಮುನ್ನ
ನೆತ್ತಿಯನು ಹೊತ್ತಿಸಿ
ಬತ್ತಿಯಾಗಿಸು ತಾಯೆ

ತುತ್ತೂರಿ ಕೈಗಿತ್ತು ಮೈಮರೆಸದಿರು ನನ್ನ
ಮದ್ದಲೆಯ ಕೈಗಿತ್ತು ಮದ್ದಾನೆಯಾಗಿಸದಿರು ನನ್ನ

ತುತ್ತಿನ ಮುಂದೆ ತಲೆಬಾಗಲು ಕಲಿಸು
ತಂಬೂರಿಯ ಕೈಗಿತ್ತು ತಲ್ಲಣವ ನಿಲಿಸು
ತುತ್ತು-ತುತ್ತೂರಿಯ ನಡುವೆ
ಸೇತುವೆಯಂತೆ ನಿಲಿಸು.

## ಎಲ್ಲಿದೆ ದಂಡೆ, ಯಾರನ್ನು ಕಂಡೆ?

ಕಡಲ ಕರುಳು ಬಳ್ಳಿಯಲ್ಲರಳಿದ ಹೂ-ಮಗನೆ
ಎಲೆ ಎಲೆ ಅಲೆಯೊಳಗಣ ನಿತ್ಯ ಹರಿದ್ವರ್ಣನೆ
ಅಂಬಿಗನೆ-
ಹೇಳು ಆ ದಂಡೆಯಲ್ಲೇನಿದೆ?

ಹುಟ್ಟಿನ ಹರಿಕಾರನೆ
ಮತ್ಸ್ಯಕನ್ನಿಕೆಯ ಪ್ರಿಯಕರನೆ
ಅಂಬಿಗನೆ-
ಹೇಳು ಆ ದಂಡೆಯಲ್ಲೇನಿದೆ?

ಸುಳಿಗಾಳಿಯ ಸನ್ಮಿತ್ರನೆ
ಮಳಲ ಮಾನಸ ಪುತ್ರನೆ
ಅಂಬಿಗನೆ ಆ ದಂಡೆಯಲ್ಲೇನಿದೆ?

೨

ನಾನು ಅಂಬಿಗನು
ನಂಬುವೆಯಾ?
ಹಾಗಾದರೆ ಕೇಳು-

ಆ ದಂಡೆಯಲ್ಲೂ....
ಈ ದಂಡೆಯಲ್ಲೇನಿದೆ ಎಂದು
ಕೇಳುತಿಹನು, ನಿನ್ನಂತೆಯೆ ಅವನು
ಸಂಶಯಾತ್ಮನು- ಅದು ನೀನು!

ಆ ದಂಡೆಯಲ್ಲೂ...
ಹೀಗೆಯೆ ಆಲಿಸಿ ನಗುತಿಹನು
ನನ್ನಂತೆಯೆ ಅವನು ಅಂಬಿಗನು
ಅದು ನಾನು

ಈಗ ಹೇಳು-
ಎಲ್ಲಿದೆ ದಂಡೆ? ಯಾರನ್ನು ಕಂಡೆ?

## ಯಾರು ನೀನು?

ಏಯ್! ಯಾರು ನೀನು?
ನಾನು ಹೂಗಿಡಗಳ ಮಿತ್ರ

ಏಯ್! ಯಾರು ನೀನು?
ನಾನು ನದಿಯ ಪಾತ್ರ

ಏಯ್! ಯಾರು ನೀನು?
ನಾನು ಅಗ್ನಿ ನೇತ್ರ

ಏಯ್! ಯಾರು ನೀನು?
ನಾನು ಉಲ್ಲಾಸ ಚೈತ್ರ

ಏಯ್! ಯಾರು ನೀನು?
ನಾನು ಪದ್ಮ ಪತ್ರ

ಏಯ್! ಯಾರು ನೀನು?
ನಾನು ನಾಟಕದ ಪಾತ್ರ

ಏಯ್! ಯಾರು ನೀನು?
ನಾನು ಅಣುಸೂತ್ರ

ಏಯ್! ಯಾರು ನೀನು?
ನಾನು ಬ್ರಹ್ಮಾಂಡ ಗಾತ್ರ

ಏಯ್! ಯಾರು ನೀನು?
ನಾನು ನೀನು ಮಾತ್ರ.

## ದೇವರಿಗೆ

ಕರುಳು ಬಳ್ಳಿಯಲಿ
ಹರಿದು ಬಂದವನು
ರಕ್ತಗತನಾಗಿಹನು

ನರನಾಡಿಯಲಿ
ಸಂಚರಿಸಿ
ಉಸಿರು ಕೊಟ್ಟಿಹನು

ಆಶೆ ಬೆಂಕಿಯನಿಕ್ಕಿ
ಎಚ್ಚರವಾಗಿಹನು

ಈಗವನ ಕಣ್ಣಿಂದಲೆ
ನಾನವನ ನೋಡುವೆನು

ಹಣ್ಣಲ್ಲಿ ಬೇರೂರಿದಂತೆ
ನನ್ನಲ್ಲಿ ಅವನು.

## ನಿವೇದನೆ

ದೀಪದ ಕುಡಿ ನಿಶ್ಚಲವಾಗಿ
ಉರಿದಿರಲು
ಅಗರಬತ್ತಿಯು ಘಮಘಮಿಸಿ
ಸುವಾಸನೆಯ ಬೀರಿರಲು
ಕುಂಕುಮದ ಬೊಟ್ಟಿಟ್ಟು
ಹೂಗಳನೇರಿಸಿ
ಹಾಲು-ಸಕ್ಕರೆಯನಿರಿಸಿ
ನನ್ನ ಕಷ್ಟಗಳ ಕಟ್ಟು ಬಿಚ್ಚಿದೆ

ನಾನು ಹೇಳುತ್ತಾ ಹೋದೆ
ಅವನು ಕೇಳುತ್ತಾ ಕೂತ

ಸಮಯ ಸರಿದದ್ದೆ ತಿಳಿಯಲಿಲ್ಲ
ಅವನೂ ಕೂತಲ್ಲಿಂದ ಕದಲಲಿಲ್ಲ

ಕೊನೆಕೊನೆಗೆ
ನನ್ನ ಕಂಠವೂ ತುಂಬಿ ಬಂದಿತ್ತು
ಅವನ ಕಣ್ಣಿಂದಲೂ ನೀರು ತುಳುಕಿತ್ತು.

# ತಾರುಣ್ಯ

ತುಂಬಿದ ಹೊಳೆ
ಸುಡುವ ಬೆಂಕಿ

ಮಿಂಚುವ ಕಣ್ಣು
ಕತ್ತಿಯ ನಾಲಗೆ

ಕುದಿಯುವ ರಕ್ತ
ಮಣಿಯದ ತೋಳು

ಚಿರತೆಯ ನಡೆ
ಹದ್ದಿನ ನೋಟ

ಒನಪು-ವಯ್ಯಾರ
ಆರ್ಭಟ-ಆವೇಶ

ಅಗಾಧ ಹಸಿವು
ಅಚಲ ವಿಶ್ವಾಸ

ಪುಟ್ಟ ಹೃದಯ
ದೊಡ್ಡ ಆಶೆ.

# ವ್ಯತ್ಯಾಸ

ರೆಕ್ಕೆಗಳಿಲ್ಲ ಎಂದು
ಆಕಾಶ ಅವಮಾನಿಸಲಿಲ್ಲ

ಗಿಡದೆತ್ತರ ಎಂದು
ಮರ ಮೂದಲಿಸಲಿಲ್ಲ

ಏನು ನಡೆಯೊ ಎಂದು
ನದಿ ಅಣಕವಾಡಲಿಲ್ಲ

ಸಣ್ಣವಳೆಂದು
ಶಿಖರ ತಿರಸ್ಕರಿಸಲಿಲ್ಲ

ಕೃಷ್ಣೆ ಎಂದು
ಬೆಳದಿಂಗಳು ನಗೆಯಾಡಲಿಲ್ಲ

ಮಾತು ಬರುವುದಿಲ್ಲ
ಎಂದೇನೂ ಅಲ್ಲ

ಮತ್ತೆ?

ಎದೆಯಲ್ಲಿ ವಿಷವಿಲ್ಲ
ನಾಲಗೆಯು ಮುಳ್ಳಲ್ಲ

ಪ್ರೀತಿಗೆ-ಮೈತ್ರಿಗೆ
ಮಿಗಿಲಿಲ್ಲ.

## ಎಲ್ಲಿ ಹೋದವ್ರೋ...

ಮುಡಿಯ ಸಿಂಗರಿಸಿದ
ಹೂವುಗಳು...

ಕೆನ್ನೆಯ ನುಣುಪಾಗಿಸಿದ
ಬಣ್ಣಗಳು...

ಮೂಗನು ಸೆಳೆದ
ಸುಗಂಧಗಳು...

ನಾಲಗೆಯ ಮುದಗೊಳಿಸಿದ
ರಸಗಳು...

ಕಿವಿಯ ತಣಿಸಿದ
ಸ್ವರಗಳು...

ಕಣ್ಣನು ಅರಳಿಸಿದ
ನೋಟಗಳು...

ಎಲ್ಲಿ ಹೋದವ್ರೋ?

ಎಣ್ಣೆ ತೀರಿದೆ
ಎಂದು ತೋರುವುದು...

ಬೆಂಕಿಯ ಕರುಣೆ
ಬತ್ತಿ
ಮತ್ತೂ ಉರಿಯುವುದು.

# ಮೋಂಬತ್ತಿ

ಒಂದು ಗಂಟೆ
ಪುಟ್ಟ ಕೋಣೆಯ
ಬೆಳಗಿದೆ

ಗೋಡೆಯ ಮೇಲೆ
ಸುಂದರಿಯ ಪಟವಿತ್ತು
ಪರಿಶೀಲಿಸಿದೆ

ಹೂದಾನಿಯಲ್ಲಿ
ತಾಜಾ ಹೂಗುಚ್ಛವಿತ್ತು
ಆಘ್ರಾಣಿಸಿದೆ

ಮರುಳೆ...
ಬೂದಿಯಾಗಿರು
ಎಂದು ಬೆಂಬತ್ತಿದ
ಪತಂಗಕ್ಕೆ
ತಿಳಿಯ ಹೇಳಿದೆ

ಮೂಲೆಯಲ್ಲಿ
ಮುದುಡಿ ಮಲಗಿದ್ದ
ಮುದುಕನ
ಮರಣಕ್ಕೂ ಸಾಕ್ಷಿಯಾದೆ

ಉರಿದೂ ಉರಿದೆ
ಕೊನೆವರೆಗೆ
ದೇಹದೊಂದಿಗೆ
ಆತ್ಮನೊಂದಿಗೆ.

## ಕಾಲು ದಾರಿಯೆ ಸಾಕು...

ಹಸಿವಾಯಿತು
ಶರಣಾದೆ ಮರಗಳಿಗೆ

ಬಾಯಾರಿತು
ತಲೆಬಾಗಿದೆ ನದಿಗಳಿಗೆ
ಮನಸೊಪ್ಪಿತು
ಸುಲಿಪಲ್ಲ ಗೊರವಂಗೆ ಒಲಿದೆ

ಗಿರಿಗಳಿಗೆ ಗವಿಗಳಿಗೆ
ಗಿಳಿ ಕೋಗಿಲೆ ನವಿಲುಗಳಿಗೆ
ಮಂದ ಮಾರುತಗಳಿಗೆ
ಕೈಯ ಮುಗಿದೆ

ನಡೆವವಳಿಗೆ ನುಡಿಯ ಹಂಗೇಕೆ?
ಕಡೆಯ ನುಡಿಯನೂ ಕೊಡವಿ
...ಮುನ್ನಡೆದೆ

ಕೂಡಿ ಬಂದಿರಲು ಗಳಿಗೆ
ಕಾಲು ದಾರಿಯೆ ಸಾಕು
ಕರೆದೊಯ್ಯಲು ಕದಳಿಗೆ...

ಇದನರಿಯದಿಹನೆ
ಚೆನ್ನಮಲ್ಲಿಕಾರ್ಜುನ?

---
ಗಲಳ/ಕಾಡು ಲಿಲ್ಲಿ ಹೂವುಗಳು

## ಮಾತನಾಡಿಸಬೇಕು

ಹೊರಳುತ್ತಿರುವ ಭೂಮಿಯನ್ನೂ
ಉರುಳುತ್ತಿರುವ ಸಾಗರವನ್ನೂ
ಮಾತನಾಡಿಸಬೇಕು

ಉರಿಯುತ್ತಿರುವ ಬೆಂಕಿಯನ್ನೂ
ಮೊರೆಯುತ್ತಿರುವ ಗಾಳಿಯನ್ನೂ
ಮಾತನಾಡಿಸಬೇಕು

ಮರಳುತ್ತಿರುವ ಹಕ್ಕಿಗಳನ್ನೂ
ಅರಳುತ್ತಿರುವ ಹೂವುಗಳನ್ನೂ
ಮಾತನಾಡಿಸಬೇಕು

ಚಿಗುರುತ್ತಿರುವ ಮರವನ್ನೂ
ಕರಗುತ್ತಿರುವ ಮಂಜನ್ನೂ
ಮಾತನಾಡಿಸಬೇಕು

ಆಕಾಶ-ಕಾಯದೊಳಗೆ
ಅವಿನಾಶಿ ಸೂರ್ಯ!

ದೇವರೆ... ಇವರದ್ದು ಯಾವ ಭಾಷೆ?!
ಎಂದಾದರೂ ಕೈಗೂಡುವುದೇ ಆಶೆ?.

# ಬೇಡ...

ಭಯ ಹುಟ್ಟಿಸಬೇಡ...
ಬೆಂಕಿಯ ಮುಟ್ಟಿ ನೋಡುತ್ತೇನೆ

ತಡೆಯಬೇಡ...
ಕಡಲೊಳಗೆ ಧುಮುಕಿ ಈಜುತ್ತೇನೆ

ನಗಬೇಡ...
ಬಿಸಿಲುಗುದುರೆಯನೇರಿ ಹೋಗುತ್ತೇನೆ

ಅಣಕಿಸಬೇಡ...
ಮರಳೊಳಗೆ ಗೂಡು ಕಟ್ಟುತ್ತೇನೆ

ಎಚ್ಚರಿಸಬೇಡ...
ಮೊಟ್ಟೆಗೆ ಕಾವಿಟ್ಟು ಮರಿ ಮಾಡುತ್ತೇನೆ

ಮುನಿಯಬೇಡ...
ಮಾರನಿಗೊಲಿದು ಮೈ ಮರೆಯುತ್ತೇನೆ

ಕೀಳಬೇಡ...
ಮೈದುಂಬಿ ಅರಳುತ್ತೇನೆ

ಕರೆಯಬೇಡ...
ಇಲ್ಲಿರಲು ಆಶೆ ಪಡುತ್ತೇನೆ

ಬೇಡ...ಬೇಡ...ಬೇಡ...!
ಹಿಂಬಾಲಿಸಬೇಡ ಸುಮ್ಮನೆ...

# ಕಣ್ಣು, ಬೂದಿ ಮತ್ತು ಜಗತ್ತು

ಆ ಕಣ್ಣು
ನೀರು ನೆಲ ಆಕಾಶ
ತನ್ನಲ್ಲೆ ಅಂದಿತು

ಆ ಕಣ್ಣು
ಮೋಹ ಮದ ಮತ್ಸರ
ತನ್ನಲ್ಲೆ ಅಂದಿತು

ಆ ಕಣ್ಣು
ಕ್ರಿಮಿ ಕೀಟ ಪಶು ಪಕ್ಷಿಗೆ
ಕನ್ನಡಿ ತಾನೆಂದಿತು

ಆ ಕಣ್ಣು
ಹುಟ್ಟು-ಸಾವು
ತನ್ನಲ್ಲೆ ಎಂದಿತು

ಆ ಕಣ್ಣು
ಜಗತ್ತು ತಾನೆಂದಿತು

೨
ಧಗ ಧಗ ಧಗ ಧಗ
ಉರಿಯುವ ಬೆಂಕಿಯಲ್ಲಿ
ಹೂವಿನ ಎಸಳುಗಳಂತಹ
ಕಣ್ಣುಗಳು...

ಜಗತ್ತು ಇಷ್ಟು ಸುಲಭವಾಗಿ
ಬೂದಿಯಾಗುವುದು
ಎಂದು ಯಾರು ಎಣಿಸಿದ್ದರು?

ಅದೂ ಕಣ್ಣೆದುರು...

# ನಾಳೆ

ನಾಳೆ ಕೊಯ್ಲಾಗುವುದು
ಹಕ್ಕಿಗಳಿಗೆ
ಹುತ್ತರಿ ಹಾಡು
ವಿದಾಯ ಹೇಳುವುದು

ತೆನೆಗಳೊಡನೆ
ಆಡವಾಡಲು ಬರುವ
ಸುಳಿಗಾಳಿ ನಿರಾಶೆಯಿಂದ
ಮರಳಬೇಕಾಗುವುದು

ಇನ್ನಿಲ್ಲಿ ನರಿ ಊಳಿಡದು
ಇಲಿ ಬಿಲ ತೋಡದು
ಕವಣೆ ಬೀಸುವ
ಹುಡುಗರಿಗಿನ್ನು ಕೆಲಸವಿರದು

ಬೆದರು ಬೊಂಬೆಯೂ
ನಾಳೆ ತನ್ನ
ವೇಷ ಕಳಚಿಡುವುದು
ಸದ್ದುಗದ್ದಲ ಸಂಭ್ರಮ
ತನಗೆ ತಾನೆ
ಇಲ್ಲವಾಗುವುದು

ಘನವಾದ ಮೌನ
ಇಡೀ ಹೊಲವ
ಆವರಿಸುವುದು.

## ಸಾವು

ಅವನು ಹಾಗೆಯೆ
ಮಾತಿನಿಂದ ಮೈಥುನದವರೆಗೆ
ಎಲ್ಲವೂ ಹಿತಮಿತ
ತೂಕದ ವ್ಯವಹಾರ
ಅರವತ್ತರ ಇಳಿವಯಸ್ಸಿನಲ್ಲೂ
ಕಪ್ಪನೆಯ ಒತ್ತಾದ ಕೂದಲು
ಉಬ್ಬರಿಸದ ಹೊಟ್ಟೆ
ಸಂಯಮ ಫಲ

ಇವನದು
ಅತಿಯೆ ಆಡಂಬರ
ಮೋಸ ದಗಾ ವಂಚನೆಯಲಿ
ಹೆಚ್ಚು ಗೊಂದಲವಿಲ್ಲ
ತುಂಬಿದ ಸಂಸಾರ
ಹೆಣ್ಣು ಹೊನ್ನೂ ಮಣ್ಣಿನಲಿ
ಹೆಚ್ಚು ರುಚಿ
ಬಾಗಿದ ಬೆನ್ನು ಮಂಜು ಕಣ್ಣು
ಚಪಲವೇ ಬಲ

ಇದು-
ಮರದ ಹಾಗೆ ಬೆಳೆಯಿತು
ಜೀವ;
ನದಿಯ ಹಾಗೆ ಹರಿಯಿತು
ಭಾವ:
ಫಳ ಫಳ ಫಳ...
ಹೊಳೆದು ಹೋಯಿತು ಕಾಲ

ಅವರವರ ಮನೆಯಲಿ

ಗೊತ್ತಾದ ಸಮಯದಲಿ
ಯಾರೂ ಬಂದ ಹಾಗಿರಲಿಲ್ಲ
ಯಾರೂ ಹೋದ ಹಾಗಿರಲಿಲ್ಲ

ಆ ಕ್ಷಣವದು ತಲ್ಲಣವೊ?
ಆ ಕ್ಷಣವದು ರೋಮಾಂಚನವೊ?
ಹೇಳಲವರು...
ಇದ್ದಂತೆ ಇರಲಿಲ್ಲ.

# ಕೋವಿಯಲಿ...

ಕೋವಿಯಲಿ ಜೀವ
ಅಂಕುರಿಸುವ ಮೊದಲು...
ಮನುಷ್ಯನ ಮಮಕಾರದ
ಹಲ್ಲು ಉದುರುವುದು
ಎದೆಯು ಕಲ್ಲಾಗುವುದು

ಮೈಯೊಳಗೆ ರಕ್ತ ಪ್ರವಾಹವು
ಹಿಮ್ಮುಖವಾಗಿ ಏರುವುದು

ತೋಳುಗಳ ಮಾಂಸ ಖಂಡಗಳು
ಸೊಕ್ಕಿ ಕುಣಿಯುವವು

ಮೂಗಿನ ಹೊಳ್ಳೆಗಳು ಬಿರಿದು
ಕಣ್ಣುಗಳು ನಿಚ್ಚಳ
ಬೇಸಿಗೆಯ ಆಕಾಶವಾಗುವುದು

ಹೂ ಬೆರಳುಗಳು ಕಟ್ಟಿಗೆಯಾಗಿ
ಸೆಟೆದು ಸಜ್ಜಾಗುವವು

-೨-

ಕೋವಿಯಲಿ ಜೀವ
ಸಂಚಾರವಾಯಿತೆಂದರೆ...

ಅದು ಮೊದಲು
ದಯೆಯನ್ನು ಬಲಿ ತೆಗೆದುಕೊಳ್ಳುವುದು

ಆಮೇಲೆ-
ಪ್ರಪಂಚದ ಮೊಗವು ಛಿದ್ರವಾಗುವ ತನಕ
ಬೆಂಕಿ ಉಗುಳುವುದು.

## ಕರೇ ಮನುಷ್ಯಾ ದಿಗಿಲು ಯಾಕ?

ಕರೇ ಮನುಷ್ಯಾ ದಿಗಿಲು ಯಾಕ?
ಮಲ್ಲಿಗೆ ಹುಡುಗಿ ಒಲಿದಾಳ ನಿನಗ

ಕಣ್ಣಿನಾಗ ಚಿಕ್ಕಿ ಬಳಗ
ಸುರಗಿ ಕ್ಯಾದಗಿ ಎದೆಯಾ ಒಳಗ
ಹಾಡೊ ಕೋಗಿಲ ಕೊಳ್ಳಿನ ಕೆಳಗ
ಆಡೊ ನವಿಲು ಹೆಜ್ಜೆಯ ತಳಗ

ಬೆಂಕಿಯ ದೇಹಾ
ಮಣ್ಣಿನ ಜೀವಾ
ನದಿಯ ಭಾವಾ
ಕಲ ಕಲ ಕಲ ಕಲ...

ಕತ್ತಿ ನಾಲಿಗಿ
ಕೈಯಾ ಬಡಿಗಿ
ಚಿಗರಿ ನಡಿಗಿ
ಸೂರ್ಯನ ಹಾಂಗ ಕುದ್ದೂ ಕುದಿವಾ
ಚಂದ್ರನ ಹಾಂಗ ತಂಪೂ ಎರೆವಾ

ಸಿಟ್ಟಿನಾಗ ಸೊಕ್ಕಿದ ಸಲಗಾ
ಪ್ರೀತಿಯಾಗ ಪಚ್ಚೆ ಮರುಗಾ
ಮಿಂಚೊ ನಾಗ ಮನದ ಒಳಗ
ಫಳ ಫಳ ಫಳ ಫಳ...

ಕರೇ ಮನುಷ್ಯಾ ದಿಗಿಲು ಯಾಕೆ?
ಮಲ್ಲಿಗಿ ಹುಡುಗಿ ಒಲಿದಾಳ ನಿನಗ

*

ಕಣಸೊ ಹರಯಾ
ಕುಣಿಸೊ ಕಾಯ
ಕಾಡಿಗಿ ಹಚ್ಚಿ ಕೆನ್ನಿಯ ಕಚ್ಚಿ
ಆಡಿ ಕೂಡಿ, ಕೂಡಿ ಆಡಿ ಕಳೆಯೊ ಮೋಹ

ಮೂಳಿ ಕಡಿವಾ
ಹೆಂಡ ಕುಡಿವಾ ದಣಿಯದೆ ಕುಣಿವಾ
ಥಕ ಥಕ ಥಕ ಥಕ...

ಕರೇ ಮನುಷ್ಯಾ ದಿಗಿಲು ಯಾಕ?
ಮಲ್ಲಿಗಿ ಹುಡುಗಿ ಒಲಿದಾಳ ನಿನಗ

ಕೃಷ್ಣನ ಹಾಂಗ
ಕಪ್ಪಗೆ ಇರುವ
ಕರೆದರೆ ಒಡನೆಯೆ
ಓಡಿ ಬರುವ...

ಬಾರೊ ಹುಡುಗಾ
ಬಿದಿರ ಮೆಳೆಗ
ತುಂಬೆದ ಉಕ್ಕಿದ
ಆಶೆಯ ಕೊಳಗ
ಝುಮ ಝುಮ ಝುಮ ಝುಮ...

ಕರೇ ಮನುಷ್ಯಾ ದಿಗಿಲು ಯಾಕ?
ಮಲ್ಲಿಗೆ ಹುಡುಗಿ ಕರಕೊ ಒಳಗ...

## ಬೀಜ ಯಜ್ಞ

ಮರುಳ....
'ಕುಡಿ'ಹೆಣ್ಣೆಂದು
ಮೆಟ್ಟಿದೆಯಾ?
ಹೆಂಗೂಸೆಂದು
ಅಟ್ಟಿದೆಯಾ?

ನಾನು ತಾಯಿಯಲ್ಲ
ನಾನು ಹೆಂಡತಿಯಲ್ಲ
ನಾನು ಮಗಳಲ್ಲ
ತೊಲಗಾಚೆ
ಇನ್ನು ನಾ ನಿನ್ನ
ಪೊರೆವವಳಲ್ಲ...

ನಾನು ಮಮತೆಯಲ್ಲ
ನಾನು ಸಹನೆಯಲ್ಲ
ನಾನು ಶಾಂತಿಯಲ್ಲ
ತೊಲಗಾಚೆ
ಇನ್ನು ನಾ ನಿನ್ನ
ನಂಬುವವಳಲ್ಲ...

ಈ ನೆಲ ಈ ನದಿ
ಈ ಹೂವು ಈ ಚಿಗುರು
ಈ ಚಿಕ್ಕೆ ಈ ಚಂದ್ರ
ನಿನ್ನಂತಹವನಿಗಲ್ಲ...

ಇನ್ನು ನಾನೆಂದರೆ
ದುಃಖ-ದುಃಸ್ವಪ್ನ

ಇನ್ನು ನಾನೆಂದರೆ
ಕೇಡು-ಕಾಠಿಣ್ಯ

ಇನ್ನು ನಾನೆಂದರೆ
ರೋಷ-ವಿಷ

ನನ್ನ ಘೋಷ
ನಿನ್ನ ನಾಶ

ನನ್ನ ಆಶೆ
ನಿನ್ನ ಬಲಿ

ನನ್ನ ವ್ಯಥೆ
ನಿನ್ನ ಚಿತೆ

'ಚಂಡಿ ಚಾಮುಂಡಿ ನಾನ್'
ಗಂಡುಸೆ ಪಿಡಿದು ಚೆಂಡಾಡುವೆ ಕೇಳ್!

ನನ್ನ ಪ್ರಾರ್ಥನೆ:
ಓ...ಬ್ರಹ್ಮಾಂಡವೆ ಕಾದು
ಕೆನ್ನಾಲಗೆಯ ಚಾಚು
ಹರಿದು ಬರುವ ಸಮಸ್ತ ಬೀಜಗಳಿಗೆ
ಹುರಿವ ಬಾಣಲೆಯಾಗು

ಓ...ಕರುಳು ಬಳ್ಳಿಯೆ
ಗರಗಸವಳ್ಳಿಯಾಗು
ನಿಷ್ಕರುಣೆಯ ಕೊರಳಿಗೆ ಉರುಳಾಗು.

## ಇನ್ನೇನು ಬೇಕು?

ಕಗ್ಗತ್ತಲ ಭೇದಿಸಲೊಂದು ಬಿಸಿಲ ಕೋಲು
ಉಸಿರಾಡಲು ಒಂದಿಷ್ಟು ಗಾಳಿ
ಇನ್ನೇನು ಬೇಕು?

ಕಚ್ಚಲೊಂದು ಬಣ್ಣದ ಚೆಂಡು
ಚಚ್ಚಲೊಂದು ಮರದ ಕುದುರೆ
ಇನ್ನೇನು ಬೇಕು?

ಬರೆಯಲೊಂದು ಮಣಿಕಟ್ಟಿನ ಸ್ಲೇಟು
ಬತ್ತಾಸು ಕೊಳ್ಳಲು ಆರು ಕಾಸು
ಇನ್ನೇನು ಬೇಕು?

ಕಣ್ಣಿಗೆ ಹಚ್ಚಲೊಂದು ಡಬ್ಬ ಕಾಡಿಗೆ
ನವಿಲು ಬಣ್ಣದ ಲಂಗ, ಜರಿ ಅಂಚಿಗೆ
ಇನ್ನೇನು ಬೇಕು?

ಅನಿಸಿದ್ದನ್ನೆಲ್ಲಾ ಹಂಚಿಕೊಳ್ಳಲು ಗೆಳತಿಯರು
ದಿಟ್ಟಿಸಿ ನೋಡುವುದಕಷ್ಟೇ ಚಂದದ ಹುಡುಗ
ಇನ್ನೇನು ಬೇಕು?

ಹುದುಗಿಕೊಳ್ಳುವುದಕ್ಕೊಂದು ಬೆಚ್ಚನೆಯ ಎದೆ
'ಅಮ್ಮಾ'ಎಂದು ಕರೆಯಲು ಒಂದು ಮಗು
ಇನ್ನೇನು ಬೇಕು?

ನನ್ನದೇ ಎಂದು ನಲಿದಾಡುವುದಕ್ಕೊಂದು ಮನೆ
ಸುಳಿದಾಡುವುದಕ್ಕೊಂದು ಮಲ್ಲಿಗೆಯ ಕೈ ತೋಟ
ಇನ್ನೇನು ಬೇಕು?

ಮಗನಿಗೊಂದು ಸರ್ಕಾರಿ ನೌಕರಿ
ಮಗಳ ಬಾಳಿಸಲೊಬ್ಬ ಅಳಿಯ
ಇನ್ನೇನು ಬೇಕು?

ಮೊಮ್ಮಗಳಿಗೆ ಸಂಪತ್ತು ಕೀರ್ತಿ
ಸ್ವಂತಕ್ಕೆ ಮುಪ್ಪಿನಲ್ಲೂ ಆದರ ಗೌರವ
ಇನ್ನೇನು ಬೇಕು?

ಮಬ್ಬು ಹರಿಯಲೊಂದು ಮಿಣುಕು ದೀಪ
'ಮತ್ತೆ ಹುಟ್ಟಿ ಬರಬೇಕು' ಅಂಥಾ ಶಾಪ
ಇನ್ನೇನು ಬೇಕು?

ಕಗ್ಗತ್ತಲ ಭೇದಿಸಲೊಂದು...

# ಗಂಡು

ಇಬ್ಬನಿಯಲಿ ತೊಯ್ದಂತಿರುವ
ಆ ಕಣ್ಣುಗಳನ್ನೂ
ಉಕ್ಕಿನಂತೆ ಗಡುಸಾಗಿರುವ
ಆ ತೋಳುಗಳನ್ನೂ
ಹೂವಿನಷ್ಟೇ ಮೃದುವಾದ
ಅವನಾತ್ಮವನ್ನೂ ಮುಟ್ಟಿದೆ

ದೇವರೇ...
ಅದು ಅಹಂಕಾರದ ಮೊಟ್ಟೆ!

ಅಂತೆಯೆ
ಉರಿಗಣ್ಣಲಿ ನಿಲಿಸಿ
ಹದವಾಗಿ ಬೇಯಿಸಿದೆ

ಚಿಪ್ಪೊಡೆದು
ಹೊಳೆಯಿತು ಮಿಂಚು

ಹಣೆಯಲ್ಲಿ ಧರಿಸಿದೆ.

# ಹೂವು

ಮರವನೇರಿ ತುದಿಯಲ್ಲಿ
ಕುಳಿತಿದೆ ಹೂವು

ಪುಟ್ಟ ಹುಡುಗಿಯರೆ...
ಕಣ್ಣರಳಿಸಿ ನೋಡಿ
ಹೂವಾಡಗಿತ್ತಿಯರೆ...
ಹೂವಿನಂದವ ನೋಡಿ
ಹಿಗ್ಗಿ ಹಾಡಿ

ಏ... ಹೂವೆ
ಹೇಗೆ ಕಾಣುವುದೊ
ಅಲ್ಲಿಂದ ಈ ಜಗತ್ತು?
ನೆಲದಲ್ಲಿರುವೆ ನಾನು
ನನಗೆ ಗೊತ್ತಾಗದು

ಹಾಂ ಹಾಗೆ ಕೈ ಚಾಚು
ದೇವ ಲೋಕವೆ ಸಿಗುವುದು
ಕಾಲು ಜಾರಿದರೆ ಹಿಡಿದುಕೊಳ್ಳುವೆ
ನಿನಗೆ ನೋವಾಗದು

ಏ...ಹೂವೆ
ನಿನ್ನ ಭಾಷೆ ನನಗೆ ಅರ್ಥವಾಗುವುದು
ನನ್ನ ಆಶೆ ನಿನ್ನಂತೆ ಆಗುವುದು.

## ಹೂವುಗಳು

ಕಿಕ್ಕಿರಿದಿದ್ದವು ಮರದಲ್ಲಿ ಹೂವುಗಳು
ಇಡೀ ಮರವು ಒಂದು ಹೂವು
ಇಡೀ ಹೂದೋಟವು ಒಂದು ಹೂಗೊಂಚಲು
ಇಡೀ ಭೂಮಂಡಲವು ಒಂದು ಹೂ ಬುಟ್ಟಿಯು
ಹೂಭಾರಕ್ಕೆ, ಪರಿಮಳಕೆ ಪಕ್ಕಾಗಿ
ಹೂವಾಡಗಿತ್ತಿಯು ತೂಗಿರಲು-

ನೋಡು...ಬಾ...
ಎಂದವನ ಕರೆದೆ

ಅವನೋ...
ಮತ್ತನಾಗಿ ಮೈದುಂಬಿ
ಮಲಗಿದ್ದ
ಹೂವಿನೆದೆಯೊಳಗೆ.

## ದೇವರ ಹೂವು

ಶಿಕ್ಷೆ ಏನೆಂಬುದು
ಹೂವಿಗೆ ತಿಳಿಯದು

ತಾನೆ ರಕ್ಷಿಸಿಕೊಳ್ಳಲು
ಹೂವು ಅರಿಯದು

ಕತ್ತಿಯ ಅಲಗಿನಿಂದ
ತಿವಿದರೂ ಹೂವು
ತುಂಬು ನಗೆಯನ್ನೆ
ಸುರಿಸುವುದು

ಅಂತೆಯೆ
ದೇವರೇ ಹೂವಿನ
ಪಾಲನೆಗೆ
ಪಣತೊಟ್ಟಿದ್ದಾನೆ

ಚಿಟ್ಟೆಯಾಗಿ
ಮರಿದುಂಬಿಯಾಗಿ
ಸದಾ ಹೂದೋಟಗಳಲ್ಲಿ
ನೆಲೆಸಿದ್ದಾನೆ

ಹೂವಿಗೆ
ರೂಪ ಸ್ಪರ್ಶ ರಸ
ಸುಗಂಧದ
ಮಾಯಾ ಜಾಲವಿತ್ತು
ಹರಸಿದ್ದಾನೆ.

## ಬುದ್ಧ ಮತ್ತು ಹೂವು

ಗರ್ವವೆಂಬುದು
ಹೂವಿನ ಬಳಿ
ಸುಳಿಯದು

ಎಷ್ಟೊಂದು ಚೆಲುವು
ಘನವಾದ ಒಲವು
ನಿರಂತರ
ಧ್ಯಾನದ ಫಲವು

ಮೈತ್ರಿ-ಕರುಣೆ
ಎಂದು ಬುದ್ಧ
ಬೋಧಿಸಿದ್ದ
ಪೂರ್ವಜನ್ಮದ ಸ್ಮರಣೆ
ಅವನು ಹೂವಾಗಿದ್ದ.

# ಹೂವಿನ ಧ್ಯಾನ

ಕರುಣಾಮಯಿ ಹೂವು
ಜಗತ್ತಿನ ಒಳಿತಿಗಾಗಿ
ಧೇನಿಸುವುದು

ಹೂವಿನ ಧ್ಯಾನವೆ ಧ್ಯಾನ
ಅದು ಪರಿಮಳಿಸಿ
ಲೋಕವ ವ್ಯಾಪಿಸುವುದು

ಪರಿಮಳಕೆ ಪಕ್ಕಾಗಿ
ಕೇಡು ತಂತಾನೆ
ಹಿಂಜರಿದು
ನಿರ್ಗಮಿಸುವುದು

ಹೂವಿಗೆ
ಧ್ಯಾನವೇ
ಜೀವನ

ಮರಣವೂ
ಹೂವಿಗೆ
ಸಮಾನ.

## ಹೂದುಂಬಿ

ಹೂವಿನ ದಳಗಳಂತೆ
ಕಣ್ಣುಗಳನು ತೆರೆದು

ಸುಗಂಧ ಜಾಲವ
ಬೀಸಿ ಸೆಳೆದಾಗ
ಬಂತು ದುಂಬಿ
ದೇವ ಮೈದುಂಬಿ ಬಂದಂತೆ
ಹೀರಿ ಹನಿ ಮಕರಂದ

ಊರಿ ಹೂ ಮೈಯೊಳಗೆ
ಹುದುಗಿ ಹಗುರಾಗಿ
ಎದೆಯ ಮೇಲೊರಗೆ

ಅಂದೆ:
ನೀನೀಗ ನನ್ನ ಕರುಣೆಯ ಕಂದ
ನಿನ್ನೊಳಗೆ ನನ್ನ
ರೂಪ ಸ್ಪರ್ಶ ರಸ ಗಂಧ!

# ಹೂವಿನ ಭಾಷೆ

ಹೂವು ಮಿತಭಾಷಿ
ಮರಿ ದುಂಬಿಯ
ಜೊತೆ ಸ್ನೇಹ
ಮಾಡುವುದು
ಗಾಳಿಯೊಡನೆ
ಲಲ್ಲೆಯಾಡುವುದು
ಚಿಟ್ಟೆಯನೂ
ಮಾತಿಗೆ ಎಳೆಯುವುದು

ಪ್ರೀತಿಯೆ
ಹೂವಿನ ಭಾಷೆ
ಅದಿಲ್ಲದಿರಲು
ಪೂರೈಸದು
ಹೂವಿನೊಂದಿಗೆ
ಮಾತಾಡುವ
ಆಶೆ.

# ಒಲುಮೆಯ ಹೂವು

ಹೂವು ಕೋಮಲವು
ಒಲುಮೆಯೆ
ನಿಶ್ಚಯವಾಗಿಯೂ
ಹೂವಿನ ಬಲವು

ಹೂವು-
ಪ್ರಖರ ಸೂರ್ಯನನ್ನೂ
ದಿಟ್ಟಿಸಿ ನೋಡುವುದು
ಬಿರುಗಾಳಿಯನೂ
ಬೆದರಿಸಿ ಅಟ್ಟುವುದು
ಮಂಜಿಗೆ ಅಂಜದು
ಮಳೆಗೂ ತಲ್ಲಣಿಸದು

ದೇವರ ಕೊರಳನ್ನೂ
ತಬ್ಬುವುದು
ದಾಸಿಯ ಹೆರಳಲ್ಲೂ
ಹಬ್ಬುವುದು

ಮನುಷ್ಯನ ಉಗುರನ್ನೂ
ಹಸುವಿನ ಹಲ್ಲನ್ನೂ
ನಗುನಗುತಾ
ಎದುರಿಸುವುದು

ಹೂವು ಕೋಮಲವು
ಕೋಮಲತೆಯೆ
ನಿಶ್ಚಯವಾಗಿಯೂ
ಹೂವಿನ ಬಲವು.

## ಹೂವಿನ ನಿಷ್ಠೆ

ಜನನದಲ್ಲಿ
ಮರಣದಲ್ಲಿ
ಹೂವು
ಜತೆಯಾಗುವುದು

ಸಂತೋಷದಲ್ಲಿ
ದುಃಖದಲ್ಲಿ
ಹೂವು
ಭಾಗಿಯಾಗುವುದು

ಮಿಕ್ಕವರು
ಮರಳಿದರೂ
ಮಸಣದಲ್ಲಿ
ಹೂವು
ಉಳಿದೇ
ಉಳಿಯುವುದು

ಅಳಿದವನ
ಆತ್ಮವನ್ನು
ಪರಮಾತ್ಮನೆಡೆ
ಕೊಂಡೊಯ್ಯುವುದು.

## ಮಾಯಾವಿ ಹೂವು

ಗಟ್ಟಿಮುಟ್ಟಾದ
ತೋಳು ತೊಡೆ ತಟ್ಟಿ
ಅಖಾಡದಲ್ಲಿ
ಸೆಣೆಸಾಡಿದ ಜಟ್ಟಿ
ಹೂಮಾಲೆ ಕಂಡೊಡನೆ
ತಲೆಬಾಗಿದ

ರಣರಂಗದಲ್ಲಿ
ನೂರಾರು ರುಂಡ
ಚೆಂಡಾಡಿದ
ಭುಜಬಲ ಪರಾಕ್ರಮಿ
ಹೂಮಾಲೆ ಕಂಡೊಡನೆ
ತಲೆ ಬಾಗಿದ

ಹೂವಿನ ಹಿರಿಮೆಯನು
ಬಲ್ಲವನೇ ಬಲ್ಲ
ಲೋಕದಲಿ ಹೂವಿಗೆ
ಎದುರಾಳಿಗಳೆ ಇಲ್ಲ!

## ಹೂವಿನ ಸಾವು

ಮಂಜಿನ ಮರೆಗೆ
ತಿಪ್ಪೆಯ ಒಳಗೆ
ಹೂವೊಂದು ಅರಳಿತ್ತು

ಮೆತ್ತನ ಮೈಯಿ
ಕೆಂಪನೆ ಬಾಯಿ
ಥರ ಥರ ನಡುಗಿತ್ತು

ಕಣ್ಣಲಿ ಕಂಬನಿ
ನುಣ್ಣನೆ ನಲ್ದನಿ
ನಸುಕನು ಹರಿದಿತ್ತು

ಯಾರದು ತಂದೆ?
ಯಾರದು ತಾಯಿ?
ಎಲ್ಲರ ಕೇಳಿತ್ತು

ನಾಯಿಯ ಬೊಗಳು
ಇರುವೆಯ ಸಾಲು
ಕಂದನ ಮುತ್ತಿತ್ತು

ಎಲ್ಲವ ದೇವರು
ಎಲ್ಲದು ಧರ್ಮವು?
ಚೀರಿ ಅತ್ತಿತ್ತು

ಕೂಸಿನ ಅಳಲು
ಮುಟ್ಟಲು ಮುಗಿಲು
ಜಾತ್ರೆಯು ನೆರೆದಿತ್ತು

ಬಂದರು, ಹೋದರು
ನಿಂದರು, ನೊಂದರು
ಜಗವದು ನಡೆದಿತ್ತು

ಕತ್ತಲು ಸುರಿಯಿತು
ಚಂದಿರ ಹೊರಳಿತು
ಜೀವವೂ ಸೊರಗಿತ್ತು

ಲೋಕವೆ ನೂಕಲು
ನಾಕವು ಸಲಹುದೆ?
ಜೋಗಿತಿ ಹಾಡಿತ್ತು.

# ಜಾತ್ರೆಯಲ್ಲಿ ಶಿವ (೨೦೦೨)

ನನ್ನ ತಂದೆ -ತಾಯಿ
**ದಯಾನಂದ-ಸರಸ್ವತಿ**
ಇವರಿಗೆ

## ತಂಗಿ ಹುಟ್ಟಿದಳು

ಸಂಭ್ರಮವಿಲ್ಲ, ಸಡಗರವಿಲ್ಲ
ಮನೆಯೊಳಗೆ ಸೂತಕದ ವಾತಾವರಣ

ಆಶೆಯಂತೆಯೆ
ಬತ್ತಿ ಹೋಗಿದೆ ಎದೆ ಹಾಲು
ಹಡೆದವ್ವ ಕೊರಗುವಳು

ಜೋಲಿ ಏರಿಸಲು
ಮೊಳೆಯೆ ಸಿಗಲೊಲ್ಲದು
ಅಪ್ಪ ಗೊಣಗುವನು

ಪೇಟೆಯಲ್ಲಿ ಮಿಠಾಯಿ
ಇದ್ದಕ್ಕಿದ್ದ ಹಾಗೆಯೆ ತುಟ್ಟಿಯಾಗಿದೆ
ಚಂದ ಮಾಡಿ ಪದ ಹಾಡುವ
ಅಜ್ಜಿಯ ಗಂಟಲೂ ಕಟ್ಟಿ ಹೋಗಿದೆ

ದೂರದಿಂದಲೇ ಶುಭ ಕೋರಿದ್ದಾರೆ
ಬಂಧುಗಳು
ಯಾರೊಬ್ಬರೂ ಸೂಚಿಸಿಲ್ಲ
ಮಗುವಿಗೆ ಹೆಸರು

ಹೋಗಲಿ ಬಿಡಿ...
ಯಾರೋ ಸಮಾಧಾನ ಮಾಡುವರು
'ಸಾಕಮ್ಮ' 'ಸಾಕು' ಸಾಕು...
ನಿಟ್ಟುಸಿರೇ ಹೆಸರಾಗಿ
ಮಗುವನು ಅಲಂಕರಿಸುವುದು

ನಿರಾಶೆ, ನಿರ್ಲಕ್ಷ್ಯ
ಹಸುಕಂದನಿಗೆ ಹೇಗೆ ಅರ್ಥವಾಗುವುದು?
ನುಣ್ಣನೆಯ ಸಣ್ಣ ದನಿ ಜಡ ಜಗತ್ತ ಭೇದಿಸುವುದು

ಹಿಡಿಯಷ್ಟಿರುವ ತಂಗಿಯನು
ಮುಡಿಯಷ್ಟಿರುವ ಅಕ್ಕ
ಅಕ್ಕರೆಯಿಂದ ಅಪ್ಪುವಳು
ಅಭಯ ನೀಡುವಳು.

## ಸಮಯವಿದೆಯೆ ಪಪ್ಪಾ?

೧

ಸಮಯವಿದೆಯೆ ಪಪ್ಪಾ?
ಆಚೆ ಗುಡ್ಡದಾಚೆ ಇದೆ ನದಿ
ಆಹಾ! ಎಷ್ಟು ಚೆಂದ ಅದರ ತುದಿ
ಅಬ್ಬಾ...ಎಷ್ಟು ದೊಡ್ಡ ಸುಳಿ
ಹೇಗೋ ಪಾರಾದೆ ನುಸುಳಿ
ಸರ್ರೆಂದು ಜಾರುವುದು ನುಣ್ಣನೆಯ ಹಾವು
ಎದೆಯೆತ್ತರಕೂ ಹಾರುವುದು ಪುಟಾಣಿ ಮೀನು
ಬಾ ಪಪ್ಪಾ ತೋರಿಸುವೆನು...

ಸಮಯವಿದೆಯೆ ಪಪ್ಪಾ?
ಬೆಟ್ಟವೇರೋಣ ಬಾ ನೀನು
ಅಲ್ಲಿಂದ ಮುಟ್ಟೋಣ
ಆಕಾಶ, ಚಂದ್ರನನ್ನು
ಮೆಟ್ಟಿಲುಗಳೇ ಬೇಡ
ಜಾರುಗುಪ್ಪೆಯಾಡುತ್ತ
ಉರುಳುರುಳಿ ಸೇರಬಹುದು ನೆಲವನ್ನು
ಬಾ ಪಪ್ಪಾ ತೋರಿಸುವೆನು...

ಕರಿಬೇವಿನ ಮರದಲ್ಲಿ
ಕಟ್ಟಿದೆ ಗುಬ್ಬಿ ಗೂಡು
ಇಟ್ಟಿದೆ ಪುಟ್ಟ ಮೊಟ್ಟೆ
ನೀನು ಬಾ ನೋಡು
ನಿಂಬೆಯ ಎಲೆ ಮೆದ್ದು
ಗಡದ್ದು ನಿದ್ದೆಯಲ್ಲಿದೆ ಕಂಬಳಿ ಹುಳು
ಬಾ ಪಪ್ಪಾ ತೋರಿಸುವೆನು...

೨

ಬೆತ್ತ ಆಚೆ ಇಡು
ಎಲ್ಲ ಹೇಳುವೆನು

ನಿಜ ಶಾಲೆ ತಪ್ಪಿಸಿ
ಸಾಬಣ್ಣನ ಹೊಲಕ್ಕೆ ಹೋಗಿದ್ದೆನು
ದೆವ್ವವಲ್ಲ...
ಬೆದರು ಬೊಂಬೆ
ಪರೀಕ್ಷೆ ಮಾಡಿದೆನು

ಬೆತ್ತ ಆಚೆ ಇಡು
ನಿಜವ ಹೇಳುವೆನು
ಪಾಠದ ಪುಸ್ತಕ ತೆರೆದರೆ
ಬರೀ ಗುಡ್ಡ ಬೆಟ್ಟ ನದಿಯೇ ಕಾಣುವುದು
ಮನ ಅದರ ಹಿಂದೆ-ಮುಂದೆ
ಸುಳಿದಾಡುವುದು

೩

ತಂಗಿ ಶಾರಿ ಬಲು ಘಾಟಿ, ಚೂಟಿ
ಖಂಡಿತ ಆಫೀಸರ್ ಆಗಿ
ಹೆಸರು ಮಾಡುವಳು

ಅಣ್ಣ ಗನಿ, ಗಣಿತದಲ್ಲಿ ಜಾಣ
ಕಂಪೂಟರ್ ಸಾಯನ್ಸ್
ಮುಗಿಸಿ ಖಂಡಿತ
ಅಮೇರಿಕೆಗೆ ಹೋಗುವನು

ನಾನು?!
ನೀನು ಒಪ್ಪಿದರೆ
ಅಜ್ಜ ನಿನಗಿತ್ತ

ತುಂಡು ಭೂಮಿಯನ್ನೇ
ಉತ್ತುವೆನು, ಬಿತ್ತುವೆನು
ಈ ಹಳೆಯ ಮನೆಯೇ ಸಾಕು
ಇಲ್ಲೇ ನಿನ್ನೊಂದಿಗೆ ಒಂದು
ತುತ್ತು ಉಣ್ಣುವೆನು

ಛೀ...ಕೂಳಿಗೆ ದಂಡ ಎಂದು
ದೂರದಿರು ಪಪ್ಪಾ
ಬೇಜಾರಾಗದಿರು...

ತೆಂಗು, ಅಡಿಕೆ, ಬಾಳೆಗೆ
ನೀರೂಡುವುದಿಲ್ಲವೆ ನೀನು?
ಹೇಳಪ್ಪ ನಾನು
ಆ ಗಿಡಕ್ಕಿಂತ ಕಡೆಯೇನು?

ನೋಡುತ್ತಾ...ಇರು
ನಿನ್ನ ಮೇಲೆಯೇ ಒಂದು
ಕವಿತೆ ಕಟ್ಟುವೆನು
ಕವಿತೆಯ ಬಲದಿಂದಲೇ
ಕೊನೆತನಕ ಬಾಳುವೆನು.

## ಬಾಳ ಸಂಜೆ

ಮಗನಿಗೆ ದೊಡ್ಡ ವಹಿವಾಟು
ಮುಂಬಯಿಯಲ್ಲಿ

ಮಗಳು ಮದುವೆಯಾಗಿ
ಮಕ್ಕಳೊಂದಿಗೆ ಕಲ್ಕತ್ತೆಯಲ್ಲಿ

ಹಣ್ಣು ಹಣ್ಣು ಮುದುಕ-ಮುದುಕಿ
ಸಾಗರದ ಒಂದು ಮೂಲೆ
ಚಿಕ್ಕ ಹಳ್ಳಿಯಲ್ಲಿ

ದೊಡ್ಡ ಮನೆ-
ಮಂಕಾಗಿ ಉರಿಯುವುದು ದೀಪ
ಭರವಸೆಯಲ್ಲಿ

ಸುಳಿದಾಡುವುದು
ನಿರೀಕ್ಷೆಯ ದೆವ್ವ
ದೊಡ್ಡ ತೋಟದಲ್ಲಿ

ಹೇಗಿರುವೆಯಮ್ಮ?
ವಿಚಾರಿಸಿಕೊಳ್ಳುವಳು
ಮಗಳು ತಪ್ಪದೇ ಫೋನಿನಲ್ಲಿ

ನಾನಿಲ್ಲದಿದ್ದರೆ ಮುಳುಗಿಯೇ
ಹೋಗುವುದು ಕಂಪನಿ
ಬರಲಾರೆ, ಗೀಚಿರುವನು
ಮಗ ಕಾಗದದಲ್ಲಿ

ತಪ್ಪದೇ ಬರುವುದು ಮನಿಯಾರ್ಡರು

ತಿಂಗಳ ಕೊನೆಯಲ್ಲಿ
'ಮನೆ ಕಡೆ ಹುಶಾರು'
'ಕೊಡಿ, ತೆಂಗು ಅಡಿಕೆಗೆ ನೀರು'
ಸಂದೇಶವಿರುವುದು ಮೂಲೆಯಲ್ಲಿ.

# ಕೊಂಡ ಹಾಯುವಳು

ಕಿವಿಗಡಚಿಕ್ಕುವಂತೆ
ತಮಟೆಯ ಸದ್ದು
ಹಾಯುತ್ತಿದ್ದಾರೆ ಕೊಂಡ
ಎಲ್ಲರೂ...

ದೊಡ್ಡಮ್ಮ-ಅಂತರಗಟ್ಟಮ್ಮ
ಅಕ್ಕ-ತಂಗಿಯರು
ಮೊದಲಾಗುವರು
ಉಳಿದವರು ದೇವಿಯನು
ಹಿಂಬಾಲಿಸುವರು

ಕಾಲು ಸುಡದೇ?
ಇಲ್ಲ ಎನ್ನುವರು!
ಅಗೋ ಲಕುಮಿ
ನನ್ನ ನೆರೆ ಮನೆಯವಳು
ಹಾಯುತ್ತಿದ್ದಾಳೆ ಕೊಂಡ...

ಗಂಡ ಕುಡಿಯುವನು
ನಿತ್ಯ ಹೊಡೆಯುವನು
ಮೈತುಂಬಾ ಸಾಲ
ಮನೆ ತುಂಬಾ ಮಕ್ಕಳು
ಹಸಿವು-ನೋವು
ಮಿಗಿಲಾಗಿ ಸವತಿಯ ಕಾಟ
ಹರಕೆ ಹೊತ್ತಿಹಳು

ಅರಿಶಿನದ ಬಟ್ಟೆ
ಬೇವಿನ ಸಿಂಗಾರ
ಇಷ್ಟಗಲ ಕುಂಕುಮ

ಹೊರೆಯಷ್ಟು ಹೂವು
ದೇವಿಯಂತೆಯೇ
ಕಂಗೊಳಿಸುತ್ತಿರುವಳು

ಒಮ್ಮೆ, ಮತ್ತೊಮ್ಮೆ
ಮಗದೊಮ್ಮೆ
ಹಾಯುವಳು ಕೊಂಡ
ನೋಡುವನವಳ ಗಂಡ
ದೂರದಿಂದಲೇ ಮಂಕಾಗಿ.

## ಪ್ರೇಮ ಪುಷ್ಪ

೧

ಮಿಂಚು ಸಂಚರಿಸುವುದಂತೆ
ಬೆಂಕಿ ಆವರಿಸುವುದಂತೆ
ಬಿರುಗಾಳಿ ಬೀಸುವುದಂತೆ
ಸಮುದ್ರ ಉಕ್ಕುವುದಂತೆ
ಜಲಪಾತ ಧುಮ್ಮಿಕ್ಕುವುದಂತೆ
ಭುವಿ ಕಂಪಿಸುವುದಂತೆ
ಸಹಸ್ರಾರ ಸಿಡಿಯುವುದಂತೆ
ಅಬ್ಬಬ್ಬಾ...
ಏನೆಲ್ಲಾ ಕಲ್ಪನೆಗಳು ಒಂದು
ಸಮಾಗಮದ ಹಿಂದೆ
ಹುಸಿಗೆ ಹಿರಿದಾದ ಅಲಂಕಾರ?!

ಆ ಕಾಮನೆಂಬುವವನು
ಬಲಹೀನನೇ ಇರಬೇಕು!
ಬೆದರು ಬೊಂಬೆಗೆ
ಹುಲ್ಲು ತುಂಬಿದ ಹಾಗೆ
ಅವನಿಗೆ ಉಸಿರು ತುಂಬಬೇಕು

ಉಸಿರು ತುಂಬಿ
ಸಜೀವಗೊಳಿಸಬೇಕು
ಅಷ್ಟು ಮಾಡಿದರೂ
ಎಷ್ಟು ಹೊತ್ತು ತಾನೆ ಉಳಿಯಬಲ್ಲ?

ಕಾಮನಬಿಲ್ಲಿನ ಹಾಗೆ
ಇದ್ದ ಎನ್ನುವಷ್ಟರಲ್ಲಿ ಇಲ್ಲ!

೨

ತಂಗಾಳಿಯ ಅಲೆಯೊಳಗೆ
ತೇಲಿ ಬರುತಿದೆ ಪ್ರೇಮ ಪುಷ್ಪ
ಪರಿಮಳಕೆ ಪಕ್ಕಾಗಿ
ನವಿರಾಗಿ ಕಂಪಿಸುತಿದೆ
ಮಿಡಿನಾಗರ

ಪರಮ ಪರಿಮಳದ ಹೂವು
ಕಣ್ಣಿಗೆ ಕಾಣಿಸದು
ಬಣ್ಣನೆಗೂ ಸಿಗದು
ಜೀವ ಅರಳುತಿದೆ
ದೇಹ ಹೊರಳುತಿದೆ

ಓ ಪ್ರೇಮ ಪುಷ್ಪವೇ
ವಿವಶಳಾಗಿಹೆನು
ನಿನಗೆ ನನ್ನನ್ನೇ
ಕೊಟ್ಟು-ಕೊಳ್ಳುವೆನು.

# ಬೆಳಸು

೧

ನನ್ನ ಅಜ್ಜಿಯದು
ತುಂಬು ಸಂಸಾರ
ನನ್ನ ಅವ್ವನಿಗೆ
ನಾಲ್ಕು ಮಂದಿ ಮಕ್ಕಳು
ನನಗೆ-
ಒಬ್ಬಳೇ ಹೆಣ್ಣು ಮಗಳು
ಎಲ್ಲ ನೆನಪಾಗುವುದು-

ನಾನು, ನನ್ನ ತಂಗಿ
ತಮ್ಮಂದಿರು ಹಂಚಿಕೊಂಡೆವು
ಅನ್ನದಂತೆಯೇ ಪ್ರೀತಿಯನ್ನು
ಸಾಧಿಸಿದೆವು ದ್ವೇಷವನ್ನು
ಬಿಟ್ಟುಕೊಟ್ಟೆವು ಹಠವನ್ನು
ಒಟ್ಟಾಗಿಯೆ ಕಂಡೆವು ಕನಸುಗಳನ್ನು

ಕಿತ್ತಾಡಿದೆವು, ರಾಜಿಯಾದೆವು
ಕರುಬಿದೆವು, ಮರುಗಿದೆವು
ಪರಸ್ಪರ ಜೊತೆಯಾಗಿಯೇ
ಇಟ್ಟೆವು ಹೆಜ್ಜೆಗಳನ್ನು
ಅವ್ವ ನೋಯುವಳೆಂದು
ಬಲಿಕೊಟ್ಟೆವು
ಸಣ್ಣ ಪುಟ್ಟ ಆಕಾಂಕ್ಷೆಗಳನ್ನು

ಅಪ್ಪ ಬಸವಳಿಯದಿರಲಿ
ಎಂದು ಹೆಗಲು ಕೊಟ್ಟೆವು ನೊಗಕ್ಕೆ
ಬಯಸದೆ ಪ್ರತಿಫಲವನ್ನು

ಕೊಟ್ಟು-ಕೊಂಡೆವು ಪ್ರೀತಿಯ
ಈಜಿ ಪ್ರವಾಹದ ವಿರುದ್ಧ
ಸೇರಿದೆವು ದಡ ಒಟ್ಟಾಗಿ

೨

ಈಗ:
ನನ್ನ ಮಗಳು ಇಡೀ
ಪರಿವಾರದ ಕಣ್ಮಣಿ
ಅಣ್ಣ, ತಂಗಿ, ತಮ್ಮ
ಸಂಬಂಧಗಳ ಒಳಸುಳಿ ಅರಿಯಳು
ರಾಜಿಯಾಗುವುದು, ಹಂಚಿಕೊಳ್ಳುವುದು
ಅವಳಿಗೆ ನಿಘಂಟಿನ ಪದಗಳು

ಅಚ್ಚೆಯ ಕುಂಡದಲ್ಲಿ
ಅವ್ವ ಅಪ್ಪನ ನೆರಳಲ್ಲೇ
ಬೆಳೆದ ಹೂಬಳ್ಳಿ
ಪ್ರಖರ ಸೂರ್ಯನನು
ಎದುರಿಸಲಾರಳು
ಅಂಜುಕುಳಿ-
ಗಾಳಿಯಾಟಕೂ ಬೆದರುವಳು

ವಿಚಿತ್ರವೆನಿಸುವುದು
ಎಷ್ಟು ಇತ್ತರೂ
ಏನೇ ಇತ್ತರೂ
ಮತ್ತಷ್ಟು ಬಯಸುವಳು
ಭಿಕ್ಷುಕಿಯಂತೆ....

ಇಡೀ ಲೋಕವ
ತಂದು ಸುರಿದರೂ ತುಂಬದವಳ
ಭಿಕ್ಷಾಪಾತ್ರೆ

ಹಸಿವು ಹಸಿವೆಂದು ಚೀರುವಳು

೩

ನನಗೋ ಒಳಗೊಳಗೆ ವೇದನೆ
ಮಮತೆ ಮುಳುವಾಯಿತೆ?
ಅನುಮಾನ-

ನಿದ್ರೆಯಿಲ್ಲದ ರಾತ್ರಿಗಳಲ್ಲಿ
ಕೆಟ್ಟ ಕನಸುಗಳು...

ಶುಭ್ರವಾದ ಆಕಾಶ
ಹಕ್ಕಿಯಾಗಿದ್ದಾಳೆ ನನ್ನ ಮಗಳು
ಅವಳಿಗೆ ರೆಕ್ಕೆಗಳೇ ಇಲ್ಲ!
ನೀಲಿ ಸಮುದ್ರ
ದೋಣಿಯಲ್ಲಿದ್ದಾಳೆ ನನ್ನ ಮಗಳು
ಹುಟ್ಟೇ ಇಲ್ಲ!

ನಾನೇ ನೆಟ್ಟು ನೀರುಣಿಸಿ
ಬೆಳೆಸಿದ ಸಸಿ
ಭರಭರ ಬೆಳೆದು ಸೊಕ್ಕಿ ನಿಂತಿದೆ
ಮರವಾಗಿ-
ಸ್ವಾರ್ಥವೇ ಅದರ ಫಲವಾಗಿ...

ಎದೆ ಹಾಲು
ಹಾಲಾಹಲವಾಗುವುದೆಂದರೆ...

# ಕಿಟಕಿಯಲ್ಲಿ ಚಂದ್ರ

ಯಾಕೆ ಬಂದೆ
ಯಾಕೆ ನಿಂದೆ
ಕಿಟಕಿಯಲ್ಲಿ ಚಂದಿರ
ಸನ್ನೆ ಮಾಡಿ ಕರೆಯಬೇಡ
ಬೆಣ್ಣೆ ಮಾತಾಡಬೇಡ
ಹೋಗಿ ಬಿಡು ಚಂದಿರ

ಪಕ್ಕದಲ್ಲಿ ಗಂಡನಿರುವ
ತೊಟ್ಟಿಲಲ್ಲಿ ಕಂದನಿರುವ
ಅಕ್ಕಪಕ್ಕ ನೋಡಿಯಾರು
ನೂರು ಕತೆಯ ಕಟ್ಟಿಯಾರು
ಹೋಗಿ ಬಿಡು ಚಂದಿರ

ನಿನ್ನ ನೋಡಿ ಆಶೆಪಟ್ಟೆ
ಆಶೆಪಟ್ಟು ಭಾಷೆ ಕೊಟ್ಟೆ
ನೆನೆದುದೊಂದು
ನಡೆದುದೊಂದು
ಮೊನ್ನೆಯಂತೆ ನಿನ್ನೆಯಲ್ಲ
ಇಂದು ನಾನು ಕನ್ನೆಯಲ್ಲ
ಹೋಗಿ ಬಿಡು ಚಂದಿರ

ಕಿಟಕಿಯಲ್ಲಿ ನಿಲ್ಲಬೇಡ
ನಿಂದು ನನ್ನ ಕಾಡಬೇಡ
ಬಲ್ಲೆ ನಿನ್ನ ಅಂತರಂಗ
ದಾಟಲಾರೆ ಕಂದರ
ಸೇರಲಾರೆ ಚಂದಿರ

## ಎಲ್ಲರೂ ದಡ ಸೇರಿದರು

ಎಲ್ಲರೂ ದಡ ಸೇರಿದರು
ನಾನು ಮಾತ್ರ ನಡು ನೀರಿನಲ್ಲಿ

ಎಲ್ಲರೂ ಹೊಳೆದಾಟಿದರು
ನಾನು ಮಾತ್ರ ಮುರುಕು ದೋಣಿಯಲ್ಲಿ

ಕತ್ತರಿಸುತ್ತಿದೆ ಚಳಿ
ತತ್ತರಿಸುತ್ತಿದೆ ಎದೆ ನಡುಗಿ

ಅಲೆಯೊಳಗೆ ತೇಲಿ ಬಿಟ್ಟಿರುವೆ
ಕಂಬನಿಯ ಮಾಲೆ
ಇರುವುದೊ ಇಲ್ಲವೊ
ನಾನರಿಯೆ ನನ್ನ ಪಾಲಿಗೆ ನಾಳೆ

ಎಲವೊ ಚಂದಿರನೆ
ನೀನಾದರೂ ಇಳಿ ಬಿಡಬಾರದೆ
ನೂಲ ಏಣಿ
ಅಗಣಿತ ತಾರಾ ಗಣಿಗಳೇ
ಈ ಕಂಗೆಟ್ಟ ಕೆಳದಿಯನು
ಕರುಣೆಯಿಂದಲೇ ಕಾಣಿ

ಏನಚ್ಚರಿ!
ನರನಾಡಿಯಲಿ ಧುಮ್ಮಿಕ್ಕಿ ಹರಿದು
ಬೆಚ್ಚಗೆ ಇಟ್ಟದ್ದಾಳೆ ರಕ್ತದೇವತೆ
ಪುಪ್ಪುಸದಲಿ ನೆಲೆಗೊಂಡು
ಹುರಿದುಂಬಿಸುತ್ತಿದ್ದಾನೆ ಪ್ರಾಣವಾಯು
ಒಂದಿನಿತೂ ಕೊಂಕಿಲ್ಲ ಬಾಡಿಲ್ಲ
ಎದೆಯೊಳಗಣ ಸಹಸ್ರ ದಳದ ಕಮಲ

ಎಣ್ಣೆ ತೀರಿದೆ ಎಂದು
ತೋರಿದರೂ
ಜೀವದೀಪ ಭರವಸೆಯಲಿ
ಉರಿಯುವುದು

ನಂಬುಗೆಯೇ ಅಂಬಿಗನು
ಹರಿಗೋಲ ಅಪ್ಪುವೆನು

ಎಲ್ಲರೂ ದಡ ಸೇರಿದರು
ನಾನೂ ಸೇರುವೆನು

ಎಲ್ಲರೂ ಹೊಳೆ ದಾಟಿದರು
ನಾನೂ ದಾಟದೆ ಇರೆನು.

# ಪ್ರಾರ್ಥನೆ

ಕದಳಿಯ ಸುಳಿಯೇ
ಕದಳಿಯ ಹೂವೇ
ಕದಳಿಯ ಫಲವೇ
ನಿಮ್ಮೆಲ್ಲರನೂ ಒಂದ ಬೇಡುವೆನು

ಹರನೇ ತನಗೆ ಗಂಡನಾಗಬೇಕೆಂದು
ಅನುದಿನವೂ ಹಂಬಲಿಸಿ
ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ
ಚೆಲುವನನು ಬೆಂಬತ್ತಿ ನಿಮ್ಮೀ
ಕದಳಿ ಬನವ ಪೊಕ್ಕ ನನ್ನಕ್ಕ
ಹೊಳೆವ ಕೆಂಜೆಡೆಗಳ ಸುಲಿಪಲ್ಲ
ಗೊರವನನು ಇದಿರಿಸಿದ
ಬಗೆಯ ಬಣ್ಣಿಸಿರೆ...

ಸರ್ವಭರಿತನಾಗಿ ಮುಖದೋರಿದವನ
ನಿರುಕಿಸಿ ನಿಬ್ಬೆರಗಾದಳೆ ನನ್ನಕ್ಕ?
ಆ ಬೆರಗಿನ ಸೊಬಗ ಬಣ್ಣಿಸಿರೆ...

ಭವಗೆದ್ದು ಬಂದ ಮಗಳೆ ಬಾರೆಂದು
ಕರುಣದಿ ಕೈವಿಡಿದು ಬಿಗಿದಪ್ಪಿದನಲ್ಲವೆ
ಆ ಗೊರವ...
ಆ ದಿವ್ಯ ನೋಟದ ಮಾಟವ ಬಣ್ಣಿಸಿರೆ...

ಕಳವಳಿಸಿ, ಕಲ್ಪಿಸಿ, ಕಂದಿ, ಕುಂದಿದವಳ
ಕಾಡಿಸಿ ಕೊನೆಗೊಮ್ಮೆ
ಕಾಮನಬಿಲ್ಲಿನಂತೆ ಮುಖದೋರಿದ
ಚನ್ನನನು ಕಂಡು ಉರಿದಳೆ? ಜರಿದಳೆ?
ಓರಿಹಿರಿ ಹಿಗ್ಗಿದಳೆ?!

ಆ ಹಿಗ್ಗಿನ ಬುಗ್ಗೆಯಿಂದ ಒಂದಿಷ್ಟು
ಸಿಹಿನೀರ ಮೊಗೆದು ಎನಗುಣಿಸಿರೆ...

ನಾನಾಕೆಯ ಕೆಳದಿ
ಕುಸುಮದ ಹಂಗು ತೊರೆದು,
ಅಕ್ಕನನು ಅನುಸರಿಸಿ
ಬೆಟ್ಟಗುಡ್ಡ ಕಣಿವೆ ಕಾನನಗಳಲಿ
ಸುಳಿಸುಳಿದು ಬಂದ ಅಣುರೇಣು
ರುಂಡ ಮಾಲೆಯ ಕೊರಳವನ
ಹೃದಯ ಕಮಲದೊಳಡಗಿದವಳ
ಸಡಗರಕೆ ಸಾಕ್ಷಿಯಂತಿರುವ
ದಿವ್ಯ ಚಕ್ಷುಗಳೇ...

ನೀವು ಬಣ್ಣಿಸದಿದ್ದರೆ
ನನ್ನಕ್ಕ ಒಲಿದು ಕೂಡಿದ
ಶ್ರೀಗಿರಿಯ ಗಾರುಡಿಗ
ಆ ಮಲ್ಲಿನಾಥನ ಮೇಲಾಣೆ!

# ಮಹಮದನ ಪ್ರೇಮಪತ್ರ

ಹತ್ತೂ ಜನರು ಓದಿಯಾದ ಮೇಲೆ
ನನ್ನ ಕೈಸೇರಿತು ಮಹಮದನ ಪತ್ರ

ತನ್ನೂರಿನ ಬಗ್ಗೆ
ತನ್ನ ಅಕ್ಕ ತಂಗಿಯರ ಬಗ್ಗೆ
ಮಲ್ಪೆಯ ಮೀನು, ಸಮುದ್ರದ ಹಿನ್ನೀರು
ಗೇರು ಹಣ್ಣು, ಗುಳ್ಳದ ಬಗ್ಗೆ
ಏನೆಲ್ಲ ಅಚ್ಚ ಕನ್ನಡದಲ್ಲಿ
ಬರೆದಿದ್ದ ಪತ್ರ-
'ಈದ್'ಗೆ ಮನೆಗೆ ಬರಲೇಬೇಕೆಂದು
ಕೇಳಿಕೊಂಡಿದ್ದ ಪತ್ರ-

ಅದರಲ್ಲಿ ಪ್ರೇಮದ ವಿಷಯವೇನೂ
ಇರಲಿಲ್ಲವಾದರೂ
ಅದು ಪ್ರೇಮ ಪತ್ರವೆಂದು
ಮುದ್ರೆ ಒತ್ತಲ್ಪಟ್ಟಿತು
ಮಹಮದನಿಗೆ ಗುದ್ದು
ನನಗೆ ಎಚ್ಚರಿಕೆ
ಹತ್ತು ಹಲವು ಹದ್ದುಗಳು
ನನ್ನ-ಅವನ
ಚಲನವಲನದ ಬಗ್ಗೆ
ನಿಗಾ ಇಡುವಂತಾಯಿತು

ಒಮ್ಮೆ ಮಹಮದನನ್ನು
ಭೇಟಿಯಾಗಬೇಕು
'ಪ್ರೇಮ ಭಾವ'
ಅರಳಿಸಿದ್ದಕ್ಕೇ
ಕ್ಷಮೆ ಬೇಡಬೇಕು ಎಂದೆಲ್ಲಾ

ಅಂದುಕೊಂಡೆನಾದರೂ...

ಪ್ರತಿಬಾರಿ...
ನಮ್ಮಿಬ್ಬರ ನಡುವೆ
ಮಸೀದಿಯ ಗುಡ್ಡ
ಅಡ್ಡ ಬರುತ್ತಿತ್ತು

ಅದೊಂದು ದಿನ-
ದೊಡ್ಡ ದೇವರ ಪಲ್ಲಕ್ಕಿ ಉತ್ಸವ
ಇಬ್ಬರನೂ ಸೀಳಿಕೊಂಡು
ಹೊರಟು ಹೋಯಿತು!

ಹೂವಿನಷ್ಟೇ ತಾಜಾ-ಕೋಮಲ
ಮಹಮದನ ಪ್ರೇಮ
ವಜ್ರದಷ್ಟೇ ಕಠಿಣ-ಕಠೋರ
ಸುತ್ತಣ ಜನರ ಆತ್ಮ...

ಗಾಳಿ-ಬೆಂಕಿ ಸೇರಿಕೊಂಡು
ತನಗೆ ತಾನೇ ಕೂಡಿಕೊಂಡು
ಎಷ್ಟು ಸುತ್ತು ಉರಿದರೇನು
ಎಷ್ಟು ಹೊತ್ತು ಉರಿದರೇನು
ಉರಿಯೊಳಗೆ ಬಿರಿಯುತ್ತಿತ್ತು
ಬಿರಿದು ತಾನೇ ಬೆಳಗುತ್ತಿತ್ತು
ಪ್ರೇಮ ಪುಷ್ಪ ಅರಳುತ್ತಿತ್ತು.

## ಬುದ್ಧ ಕವಿತೆ

### ೧. ಮಹಾಯಾನ

ತಾನು ತುಂಬಾ ಸಣ್ಣವನು
ಅಂದುಕೊಂಡವನು
ಬೃಹತ್ ಬುದ್ಧನನು ಕೆತ್ತಿದ
ಆಹಾ!
ಏನು, ಆಳ, ಅಗಲ, ವಿಸ್ತಾರ-
ಆಕಾಶದೆತ್ತರ!
ಗುಲಾಬಿ ಮೃದು ಪಾದಗಳನ್ನು
ಕೆತ್ತುತ್ತಾ, ಕೆತ್ತುತ್ತಾ
ಕಣ್ಣು, ತುಟಿ, ಮೂಗು
ಮುಂಗುರುಳ ಅರಳಿಸುತ್ತಾ
ನೆಲದಲ್ಲಿದ್ದವ
ಮುಗಿಲು ಮುಟ್ಟಿದ

### ೨. ಆ ಬುದ್ಧ-ಈ ಬುದ್ಧ

ಆ ಬುದ್ಧನಿಗೆ
ಕಣ್ಣು ಕಿರಿದು, ಬಾಯಿ ಹಿರಿದು
ಈ ಬುದ್ಧನಿಗೆ
ಆನೆ ಕಿವಿ, ಗಿಣಿ ಮೂಗು
ಆ ಬುದ್ಧನಿಗೆ
ದೊಡ್ಡ ಹೊಟ್ಟೆ, ಚಿಕ್ಕ ರಟ್ಟೆ
ಈ ಬುದ್ಧನಿಗೆ
ಅಗಲ ಹಣೆ, ಚೂಪು ಗಲ್ಲ
ಆ ಬುದ್ಧ ತುಂಟ-ಪೋರ, ನಗೆಗಾರ
ಈ ಬುದ್ಧಘನ-ಘೋರ, ಗಂಭೀರ
ಅವರವರ ಕನಸು, ಕಲ್ಪನೆ, ನಿರೀಕ್ಷೆಗೆ

ತಕ್ಕಂತೆ ಬುದ್ಧ
'ಭಾವ'ಅನ್ನೋದೇ ಬುದ್ಧ

೩. ಬಮಿಯಾನಿನ ಬೆಟ್ಟ

ಆ ಬೆಟ್ಟದಲ್ಲಿ ಜಗತ್ತಿನ
ಅತಿ ಎತ್ತರದ ಬುದ್ಧ
ಸ್ವಲ್ಪ ದಿನಗಳ ಕಾಲ ತಂಗಿದ್ದ
ಈಗ ಬೆಟ್ಟ ಮಾತ್ರ ಇದೆ-
ಬುದ್ಧನಿಲ್ಲ

೪. ನಶ್ವರ

ಬಮಿಯಾನಿನ ಬುದ್ಧ
ನೋಡುಗರ ಕಂಗಳಿಗೆ
ಹಬ್ಬವಾಗಿದ್ದ
ಇದೀಗ ಕಡಿದ ತಲೆ
ಮುರಿದ ಕಾಲು,
ಕುರುಡುಗಣ್ಣು, ಹರಿದ ಮೂಗು
ನಿರಂತರ ಶೋಕ
ಉನ್ನತಿಯಲ್ಲಿದ್ದುದು
ಅಧೋಗತಿಗೆ ಬರುವುದು ನಿಶ್ಚಿತ
ಹಾಗಂದಿದ್ದನಲ್ಲವೆ ತಥಾಗತ?

೫. ಪಾಲು

ಬುದ್ಧನನ್ನು ಉಳಿಸಿ
ಎಂದು ಯಾಕೆ
ಮೊರೆಯಿಡುತ್ತೀರಿ?
ನೀವೇ ಇತ್ತ

ಮದ್ದು ಗುಂಡು, ಫಿರಂಗಿಗಳು
ನೀವೇ ಇತ್ತ
ಕ್ಷಿಪಣಿ,ರಾಕೆಟ್ಟು, ಟ್ಯಾಂಕರುಗಳು
ನಿಮ್ಮವೇ
ತಂತ್ರ-ಮಂತ್ರಗಳು

ಅವರ ಪಾಪದಲ್ಲಿ
ನೀವೂ ಪಾಲುದಾರರು

**೬. ಬುದ್ಧ-ಎದ್ದ**

ಬಮಿಯಾನಿನಲ್ಲಿ ಜಗತ್ತಿನ
ಅತಿ ಎತ್ತರದ ಬುದ್ಧ ಇದ್ದ
ಅನ್ನುವುದೇ ಗೊತ್ತಿರಲಿಲ್ಲ

ಇದೀಗ-
ರೇಡಿಯೋ, ಟೀವಿ, ಫೋನು
ಪೇಪರಿನ ತುಂಬಾ ಬುದ್ಧ!
ಇಂಟರ್‌ನೆಟ್ಟಿನಲ್ಲೂ ಬುದ್ಧ!

ಗಾಳಿ, ಬೆಳಕು, ನೀರು, ದೀಪ
ಇಲ್ದೇ ಇರೋ ಹಟ್ಟಿಯಿಂದ ಹಿಡಿದು
ಏರ್‌ಕಂಡೀಷನ್ ಹಾಲಿನ ತನಕ
ಬುದ್ಧನದೇ ಸುದ್ದಿ...

ಬುದ್ಧ ಬಿದ್ದ ಎಂದು
ದುಃಖಿಸುವವರು ನಿಜಕ್ಕೂ ಹುಚ್ಚರು
ಅವನು ಈಗ, ಇದೀಗ
ಎದ್ದು ಕುಳಿತಿದ್ದಾನೆ

೭. ಕ್ಷಣಿಕ

ಬಮಿಯಾನಿನ ಬೆಟ್ಟದಲ್ಲಿ
ಬೆಳದಿಂಗಳ ಬೆಳೆದವರೆ ಈಗಿಲ್ಲ...
ಬೆಳದಿಂಗಳ ಅಟ್ಟಾಡಿಸಿ, ಓಡಿಸಿ
ಕಾರಿರುಳ ಬಿತ್ತುತ್ತಿರುವವರು
ಎಷ್ಟು ದಿನ ಇದ್ದಾರು?
ತಿರುಗುತ್ತಿರಲು ನಿರಂತರ ಭವಚಕ್ರ
ಕಟ್ಟಿದವರೂ ಇಲ್ಲ
ಕೆಡವಿದವರೂ ಇಲ್ಲ

೮. ಆಗ-ಈಗ

ಮೊದಲು ಬಮಿಯಾನಿನ
ಬೆಟ್ಟದಲ್ಲಿ ಬುದ್ಧ ನಿಂತಿದ್ದ
ನೆಲಕ್ಕುರುಳಿದ ಮೇಲೆ
ನೆಲ, ನೀರು, ಗಾಳಿ, ಆಕಾಶದ
ಕಣಕಣದಲ್ಲೂ
ಹಂಚಿಹೋಗಿದ್ದಾನೆ ಬುದ್ಧ

ಅಯ್ಯಾ... ಯೋಧ-
ನಿನ್ನ ಪೇಟ ಕೊಡವಿ ನೋಡು
ಲಕ್ಷಾಂತರ ಬುದ್ಧರಿದ್ದಾರೆ
ನಿನ್ನ ಬಟ್ಟೆ, ಮೆಟ್ಟು
ಎಲ್ಲದರಲ್ಲಿ ಅಡಗಿ ಕುಂತಿದ್ದಾರೆ

ನಾಳೆ ನೀನು, ನಿನ್ನ ಮಕ್ಕಳು
ಅವರ ಮಕ್ಕಳು
ಕುಡಿಯುವ ನೀರಿನಲ್ಲಿ
ಉಣ್ಣುವ ಅನ್ನದಲ್ಲಿ

ಉಸಿರಾಡುವ ಗಾಳಿಯಲ್ಲಿ
ಬುದ್ಧನಿರುತ್ತಾನೆ

### ೯. ಅಲ್ಲೂ ಬುದ್ಧ-ಇಲ್ಲೂ ಬುದ್ಧ

ತಾಲಿಬಾನಿನ ಯೋಧನಿಗೆ ಅನಿಸಿದ್ದು:
ಮಂಡಿಯೂರಿ ಕೈ ಜೋಡಿಸಿ
ಕಣ್ಮುಚ್ಚಿ ಪ್ರಾರ್ಥಿಸಿದರೆ
ಕಣ್ಮುಂದೆ ಮೂಡುವವನು ಬುದ್ಧ
ಒಡೆದ ತುಟಿ, ಹರಿದ ಮೂಗು
ಯಾ ಅಲ್ಲಾ!
ಬುದ್ಧ, ಬುದ್ಧ, ಬುದ್ಧ...

ಮಲಗಿದರೂ ಬುದ್ಧ, ಎದ್ದರೂ ಬುದ್ಧ
ಕನಸಲ್ಲಿ, ಮನಸಲ್ಲಿ
ನರನಾಡಿ ಮೂಳೆ ಮಾಂಸ ಮಜ್ಜೆಯಲಿ
ಬುದ್ಧ, ಬುದ್ಧ, ಬುದ್ಧ...

### ೧೦. ಬುದ್ಧ

ಕಾಲ, ದೇಶ, ಭಾಷೆ
ಲಿಂಗ, ಜಾತಿ ಮೀರಿ
ನಿಂತವನೆ ಬುದ್ಧ.

(ಅಫ್ಘಾನಿಸ್ತಾನದ ಕೇಂದ್ರ ಭಾಗದ ಬಮಿಯಾನಿನಲ್ಲಿ ಬುದ್ಧ ವಿಗ್ರಹಗಳು ಇಸ್ಲಾಂ ಧರ್ಮಕ್ಕೆ ಅವಮಾನ ಮಾಡುತ್ತಿವೆ ಎಂಬ ಕಾರಣಕ್ಕೆ ತಾಲಿಬಾನ್ ಆಡಳಿತ, ದೇಶದಲ್ಲಿರುವ ಇಂತಹ ವಿಗ್ರಹಗಳ ನಾಶಕ್ಕೆ ಫೆಬ್ರವರಿ ೨೬, ೨೦೦೧ ರಂದು ಆದೇಶ ನೀಡಿತು. ಜಗತ್ತಿನ ಅತ್ಯಂತ ಎತ್ತರದ ಭಂಗಿಯಲ್ಲಿರುವ ಬುದ್ಧ ಈಗಿಲ್ಲ. )

## ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು

'ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು
ಮಗುವಾಗಿದ್ದಾಗಿನಿಂದಲೂ ಬಲ್ಲೆ ಅವನನ್ನು

'ಬಾ' 'ಬಾ' ಎಂದವನ ಎಷ್ಟು ಸಲ ಕರೆದಿದ್ದೆನು
ಬರುವನೊ, ಬಾರನೊ, ತಿಳಿಯದೆ
ಇಂದಿಗೂ ಕಾಯುತ್ತಲೇ ಇರುವೆನು
ಹೇಳಿ ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು

ಯಾವ ಕಾಲದಲ್ಲಿ, ಯಾವ ಕೊಳದಲ್ಲಿ
ನೈದಿಲೆಯಾಗಿದ್ದೆನೋ ಏನೋ...
ಯಾವ ಬೆಟ್ಟದಲ್ಲಿ, ಯಾವ ಘಟ್ಟದಲ್ಲಿ
ಮೋಡವಾಗಿದ್ದೆನೋ ಏನೋ...
ಈಗಲೂ ಅದೇ ನೆನಪಲ್ಲಿ ಅದೇ ತಪದಲ್ಲಿ
ಅನುದಿನವೂ ನೆನೆಯುವೆನು
ಹೇಳಿ ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು

ಕಣ್ಣು, ಮೂಗು, ಬಾಯಿ, ಏನಿಲ್ಲದಿದ್ದರೂ
ಇದ್ದ ಹಾಗೆಯೆ ಕಾಣುವನು ಅವನು
ರೊಟ್ಟಿಯ ಚೂರಿನಂತೆ, ಹಣ್ಣಿನ ಹೋಳಿನಂತೆ
ಬೆಣ್ಣೆಯ ಮುದ್ದೆಯಂತೆ, ಬೆಳ್ಳಿಯ ತಟ್ಟೆಯಂತೆ
ಬಹುರೂಪಿ ಅಡಿಗಡಿಗೂ ಬೆರಗಾಗುವೆನು
ಹೇಳಿ ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು

ಯಾವ ಲೋಕದಲ್ಲಿ, ಯಾವ ಎರಕದಲ್ಲಿ
ರೂಪುಗೊಂಡವನೋ ಏನೋ...
ಯಾವ ಕಾಲದವನೋ ಏನವನ ಜಾತಿ?
ಮಾತಿನ ಹಂಗಿಲ್ಲದೇ ನನ್ನನ್ನು ಮುಟ್ಟಿಹನು
ಹೇಳಿ ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು

ಉಪ್ಪರಿಗೆಯನೇರಿ ಕಾದವನ ದಾರಿ ಎದುರುಗೊಳ್ಳುವೆನು
ಬೆಟ್ಟದಾಚೆಗೆ ಬೆಳದಿಂಗಳ ತೋಳು ಚಾಚಿ
ಬೆಳ್ಳಿಕಿರಣಗಳ ಮಾಲೆ ತಂದೇ ತರುವನು
ಸಿದ್ಧಾರ್ಥನ ಪ್ರಿಯಮಿತ್ರ, ಮೈತ್ರಿಯೇ ಮಹಾಸೂತ್ರ
ಪ್ರೀತಿಸದೆ ಇರಲಾರೆ ಚಂದ್ರನನ್ನು.

## ಚಂಡಿ

ಕಪ್ಪಿಟ್ಟ ಮುಖ
ಮಿಂಚು ಕಣ್ಣುಗಳು
ಬೆಂಕಿ-ಬಿಸಿಯುಸಿರು
ಗುಡುಗು -ಸಿಡಿಲು
ಮೃದು ವಚನಗಳು!

ಅವಳು
ಕಣ್ಣು ನೆಟ್ಟಲೆಲ್ಲಾ ಕಂದಕಗಳು

ತೋಳುಗಳು ತಾಕಿ
ನೆಲಕ್ಕುರುಳಿದವು ಹೆಮ್ಮರಗಳು

ಕಾಲಾಡಿದಲ್ಲೆಲ್ಲಾ ಚಿಮ್ಮಿದವು
ಬಿಸಿ ನೀರ ಬುಗ್ಗೆಗಳು
ತಲ್ಲಣಿಸಿತು
ಸಕಲ ಜೀವ-ಜಗತ್ತು

ಕೋಪವೋ...
ಪರಿತಾಪವೋ...
ಅವಳೇ ಬಲ್ಲಳು

ನಿಂತಲ್ಲಿ ನಿಲ್ಲಳು
ಬಂದಂತೆಯೇ ಹೊರಟು ಹೋದಳು.

## ಜಾತ್ರೆಯಲ್ಲಿ ಶಿವ

೧

ಅದೇ ಆ ಶಿವನ ವೇಷಧಾರಿ
ನಾನಿದ್ದ ಬಸ್ಸಿನಲ್ಲಿಯೇ ಇದ್ದ
ನನ್ನೊಂದಿಗೆ ಬಸ್ಸಿನಿಂದಿಳಿದ

ತೇಗದ ಮರದ ಹಾಗೆ
ಉದ್ದಕೆ ಸಪೂರ
ಮೋಡದ ಮೈ ಬಣ್ಣ, ಮಿಂಚಿನ ನಗು
ಮುಡಿಗೆ ತಗಡಿನ ಚಂದ್ರನನು ಮುಡಿದಿದ್ದ
ತೋಳಿಗೆ ಕಣಗಿಲೆಯ ಹೂವು
ಕೊರಳಲ್ಲಿ ಪ್ಲಾಸ್ಟಿಕ್ ಹಾವು
ಹುಲಿ ಚರ್ಮದ ಚಿತ್ರವಿರುವ
ಮಾಸಿದ ಹಳದಿ ಬಣ್ಣದ ಅರ್ಧ ಲುಂಗಿ
ಹವಾಯಿ ಚಪ್ಪಲಿ ಧರಿಸಿದ್ದ...

ನನ್ನ ಬೆರಗಿಗೆ ಉತ್ತರ
ನೀಡುವವನಂತೆ
ಡಮರುಗ ನುಡಿಸಿ
ತ್ರಿಶೂಲ ಆಡಿಸಿ
ಕಾಲ್ಗೆಜ್ಜೆ ಗಲಗಲ ಕುಣಿಸಿ
ನಾ...ಶಿವ ಎಂದ

೨.

ನಾ...ಮುಂದೆ ಅವ...ಹಿಂದೆ
ಜಾತ್ರೆಯ ಕೌಂಟರಿನಲ್ಲಿ
ಟಿಕೇಟು ಕೊಳ್ಳುವಾಗಲೂ
ಬೆನ್ನ ಹಿಂದೆಯೇ ಇದ್ದ
ಗಿಲೀಟು ಒಡವೆಯಂಗಡಿಯಲ್ಲಿ

ಕಣ್ಣ ಮುಂದೆಯೇ ಬಂದ
ಫಳಫಳ ಹೊಳೆಯುವ
ಮೂಗುತಿಯನು ಅಂಗೈಯೊಳಗೆ
ಹೊರಳಾಡಿಸಿ
ಈ ವಜ್ರಕ್ಕೆಷ್ಟೆಪ್ಪಾ ಬೆಲೆ
ಎಂದು ಅಂಗಡಿಯಾತನ ಛೇಡಿಸಿದ

ಪುಗ್ಗೆಯಂಗಡಿಯಲ್ಲಿ ಒಂದೊಂದೂ
ಪುಗ್ಗೆಯ ಮೇಲೂ ಮೃದುವಾಗಿ ಕೈಯಾಡಿಸಿ
ಪರಪರ ಶಬ್ದಕ್ಕೆ ಕಿವಿಯಾನಿಸಿ
ಬಾಗಿಲು ದಾಟುವುದರೊಳಗೆ
ಠುಸ್ಸೆನ್ನುವುದೀ ಪುಗ್ಗೆ, ಜೊತೆಗೆ
ಹಿಗ್ಗಿನ ಬುಗ್ಗೆ ಎಂದು ಅಲ್ಲೇ ಪದ ಕಟ್ಟಿ ಹಾಡಿ
ಒಂದು ಪೀಪಿ, ಒಂದು ವಾಚು ಪುಕ್ಕಟೆ ಪಡೆದ

ಬಣ್ಣ ಬಣ್ಣದ ಪರಕಾರಗಳ ತೆಗೆಸಿ
ಪೂರ ಅಂಗಡಿಯನೆ ಎಳೆದಾಡಿಸಿ
ಚೌಕಾಸಿ ಬೆಲೆಯಲ್ಲೇ
ಒಂದು ಗಜ ರವಿಕೆಯ ಬಟ್ಟೆ ಕೊಂಡ

ಕೆಂಪು ನೀರಿನ ಶರಬತ್ತಿನಂಗಡಿಯಲ್ಲಿ
ಗಿಣಿ ಶಾಸ್ತ್ರದವನೊಡನೆ ಹರಕು
ಛತ್ರಿಯ ಅಡಿಯಲ್ಲಿ...
ಕರಡಿ ಮಜಲು ಕುಣಿತದ
ಕರಡಿಯಾಸದವನೊಡನೆ
ಅಲ್ಲಿ...ಇಲ್ಲಿ...ಇಲ್ಲಿ...ಅಲ್ಲಿ
ಜಾತ್ರೆಯ ಉದ್ದಗಲ ಹಬ್ಬಿ ನಿಂತವನು
ಮೋಟು ಬೀಡಿಯ ಸೇದುತ್ತ
ಕಡಲೆಯ-ಪುರಿಯ
ಗುಡ್ಡವ ದಾಟಿ ಹೋದ

೩

ಹೋದ ಎನ್ನುವಷ್ಟರಲ್ಲಿಯೇ
ಬತ್ತಾಸಿನ ಅಂಗಡಿಯಲ್ಲಿ
ಪರಿಚಿತ ನಗೆಯೊಡನೆ ಪ್ರತ್ಯಕ್ಷ!

ಮೆಲ್ಲನೆ ಬಳಿ ಸಾರಿ ಗೋಣ ಬಗ್ಗಿಸಿ
ಮಗ ಹಸಿದಿದ್ದಾನೆ-
ಹೆಂಡತಿಗೆ ಕಾಯಿಲೆ ಅಂದ
ಬಾಡಿದ ಮುಖ, ಬಸಿದಿತ್ತು ದುಃಖ

ಗಣಪ ಹಸಿದಿದ್ದಾನೆ
ಗಿರಿಜೆಗೆ ಕಾಯಿಲೆ...
ಹೆಂಡತಿ-ಮಕ್ಕಳಿಗಾಗಿ
ಶಿವನಲ್ಲದೆ ಭವಿ ಅಳುವನೆ?!

ಪುಟ್ಟ ಪರ್ಸಿನ ಮೂಲೆ ಮೂಲೆಯನು ತಡವಿ
ರುದ್ರನೊಡ್ಡಿದ ಬೊಗಸೆಗೆ
ಐದರ ನೋಟಿರಿಸಿ ಇಷ್ಟೇ ಅಂದೆ!

ಮಿಂಚಂತೆ ಹೊಳೆದು
ತಳಾಂಗು ತದಿಗಿಣ ತೋಂ ಎಂದು
ನಾಟ್ಯದ ಮಟ್ಟಿನಲಿ ಕುಣಿದು
ಅರ್ಧ ನಿಮೀಲಿತ ನೇತ್ರನಾಗಿ
ನಟರಾಜನ ಭಂಗಿಯಲ್ಲಿ ನಿಂತುಬಿಟ್ಟ!

ಬಿಟ್ಟ ಬಾಯಿ ಬಿಟ್ಟಂತೆಯೇ
ನೆಟ್ಟ ಕಣ್ಣು ನೆಟ್ಟಂತೆಯೇ
ಎರಡೂ ಕೈ ಜೋಡಿಸಿ
ಮೈದುಂಬಿ ನುಡಿದು ಬಿಟ್ಟೆ...

ಸಾಕ್ಷಾತ್ ಶಿವ...
ಸಾಕ್ಷಾತ್ ಶಿವ!!

## ಭುವನ ಸುಂದರಿ

ಎಲ್ಲರೂ ಬೆಚ್ಚಗೆ ಹೊದ್ದು ಮಲಗಿರಲು
ಇವಳು ಎದ್ದು ಜಿಮ್‌ನಲ್ಲಿ ಬೆವರು
ಸುರಿಸುತ್ತಾ ಕಸರತ್ತು ಮಾಡುವಳು

ಎಲ್ಲರೂ ಹಾಲು ತುಪ್ಪದಲ್ಲಿ
ಕೈತೊಳೆದರೆ-
ಇವಳು ಹಣ್ಣು-ತರಕಾರಿ
ಒಣಗಿದ ಚಪಾತಿಯ
ಮೇಲೆಯೇ ಜೀವಿಸುವಳು

ಎದುರಿಗೆ ಯಾರೂ ಇಲ್ಲ
ಆದರೂ ಕೈ ಬೀಸುವಳು
ಕಾರಣವೆ ಇಲ್ಲ
ಸುಮ್ಮನೆ ನಗುವಳು
ಬಳುಕಿ ಬಾಗಿ
ಬೆಕ್ಕಿನ ಹೆಜ್ಜೆಯನನುಸರಿಸಿ
ತಾಲೀಮು ನಡೆಸುವಳು

ತಲೆಯೊಳಗೆ ಏನೆಲ್ಲ ತುಂಬಿಕೊಂಡು
ಗಿಳಿಯಂತೆ ಒಪ್ಪವಾಗಿ
ಪಾಠ ಒಪ್ಪಿಸುವಳು
ಚಾಣದಿಂದ ಕಲ್ಲು ಕೆತ್ತಿದ ಹಾಗೆ
ಇವಳ ಅಂಗ ಅಂಗವನೂ
ಕೆತ್ತಿ ಸ್ಪರ್ಧೆಗೆ ಅಣಿ ಮಾಡುವರು
ಇಷ್ಟು ಮೊಲೆ, ಇಷ್ಟೇ ನಿತಂಬ
ಸುರಿದು-ಅಳೆಯುವರು

ಒಂದು ದಿನ-
ಕೋರೈಸುವ ಬೆಳಕಿನಂಗಳದಲ್ಲಿ
ಕಿರೀಟವಿರಿಸಿಕೊಂಡು
ಸಿಂಹಾಸನದಲಿ ಕೂತು
ಸುಂದರಿಯರ ನಡುವೆ
ಮಹಾಸುಂದರಿಯಾಗಿ
ಮೆರೆಯುವಳು

ಚಪ್ಪಾಳೆ, ಕೇಕೆ, ಶಿಳ್ಳೆ
ಹೇಳಿ ಎಷ್ಟು ಜನಕೆ
ಈ ಭಾಗ್ಯ ದೊರೆಯುವುದು?
ಅಲೆಯ ಮೇಲಣ ಗುಳ್ಳೆಯೋ
ಪದ್ಮ ಪತ್ರದ ಮೇಲಣ ಜಲಬಿಂದುವೋ
ಅದು ಆಮೇಲಿನ ಮಾತು

ಜಗತ್ತು ಒಂದು ಚಣವಾದರೂ
ಕಣ್ಣರಳಿಸಿ, ಇವಳತ್ತ ನೋಡುವುದು
ಮತ್ತೊಬ್ಬಳು ಬರುವ ತನಕ
ಇವಳತ್ತಲೇ ನೋಡುತ್ತಾ ಇರುವುದು!

## ನಿನ್ನ ನಂತರ...

ಇಷ್ಟು ದೊಡ್ಡ ಮನೆ
ಯಾರು ಸಂಭಾಳಿಸುವರು?

ಇಷ್ಟು ಚಂದದ ತೋಟ
ಯಾರು ನೋಡಿಕೊಳ್ಳುವವರು?

ಒಡವೆ ವಸ್ತು ಸೀರೆ
ಯಾರುಟ್ಟು ನಲಿವರು?

ಆಶೆಯಿಂದ ಹೊಂದಿರುವ
ಚಿಕ್ಕಪುಟ್ಟ ವಸ್ತುಗಳು

ಅಕ್ಕರೆಯ ಗಂಡ
ಮುದ್ದಾದ ಮಕ್ಕಳು

ಸ್ನೇಹಿತರು-ಸಂಬಂಧಿಗಳು
ಸುತ್ತಿಕೊಂಡಿವೆ ಸರಪಳಿಗಳು

ಸಮಯವಿದೆ ಇನ್ನೂ
ನಾಟಕ ಮುಗಿಯಲು

ಬಯಸುವುದು ಜೀವ
ನಿರಂತರ ನಟಿಸಲು

# ದುಃಖ

ದುಃಖ ಸಮುದ್ರವು
ಯೋಜನಗಳಾಚೆ
ಕೇಳುವುದರ ಮೊರೆತ

ಸಂತೋಷದ ದೊಡ್ಡ
ಹಡಗುಗಳನ್ನು
ಅದು ಮುಳುಗಿಸುವುದು

ನೆಮ್ಮದಿಯ
ಹುಟ್ಟಡಗಿಸುವುದು

ಷ್ಪಾಪಿ ಹುಲ್ಲು ಕಡ್ಡಿ
ಮಾತ್ರವೇ
ರಾಂತಕವಾಗಿ
ಲಿ ದಡ ಸೇರುವುದು.

## ಬೆಕ್ಕು ಅಡ್ಡ ಹೋಯಿತು

ಗಕ್ಕೆಂದು ನಿಂತೆ ಒಂದು ಚಣ
ಶುರುವಾಯಿತು ಅನುಮಾನ

ಅವೊತ್ತು ಇಡೀ ದಿನ
ಬೆಕ್ಕಿನದೇ ಧ್ಯಾನ

ಮೀನು ಮಾರುವವಳಿಗೆ
ಮಾಯೆ ಕವಿದಿರಲು

ಒಣ ಮೀನಿಗೂ
ಜೀವ ಬಂದಿರಲು

ಘಮ ಘಮಿಸಿ ಅದು
ಲೋಕವನೆ ಸೆಳೆದಿರಲು

ಪರಿಮಳದ ಪರಿಣಾಮ
ಮೂಗರಳಿಸಿ ಬೆಕ್ಕು
ಅಡ್ಡ ಹೋಯಿತು.

# ನಾದಿನಿ ಬಂದು ಹೋದಳು

ಬಿಸಿಲು ಕಂಡಿತು ಹಾಸಿಗೆ
ಹಳೆಯ ದಿಂಬಿಗೆ ಹೊಸಾ ಹೊದಿಕೆ

ಅತ್ತೆ ಮಾವನ ಪಟಗಳು
ಲಕಲಕ ಹೊಳೆದು
ಹೂವ ಮುಡಿದವು

ದೇವರಿಗೆ ದೀಪ
ಹೊಸಿಲಿಗೆ ಕುಂಕುಮ
ಬಾಗಿಲಿಗೆ ನೀರು

ಚಿತ್ರಾನ್ನ, ಕೋಸಂಬರಿ
ವಡೆ, ಪಾಯಸದಲಿ
ಕಲ್ಲು ಸಿಗದಿರಲಿ ಎಂದು
ಪ್ರಾರ್ಥನೆ!

ಮಡಿಲು ತುಂಬಿದ
ಸೀರೆ-ಕುಪ್ಪಸ
ಇಷ್ಟವಾಯಿತೋ...
ಇಲ್ಲವೋ ಅನುಮಾನ

ಅನಿಸುವುದು ಹತ್ತಿರ
ಹತ್ತಿರ ಹೋಗಬೇಕೆಂದು
ಏನು ಮಾಡಲಿ?
ಹಾಳು ಕಂದಕ
ಹಿರಿದಾಗುವುದು.

## ದೊಡ್ಡ ಮರ

ಆ ದೇವರೇ ವರವಿತ್ತಂತೆ
ಆ ಊರಿಗೆ ಅದೇ ದೊಡ್ಡ ಮರ

ನಾಲ್ಕು ಹೆಗಲುಗಳು,ನೂರು ಕೈಗಳು
ಸಾವಿರ ಸಾವಿರ ಬೆರಳುಗಳು
ಸೂರ್ಯ ಚಂದ್ರ ನಕ್ಷತ್ರ ಗಣಗಳು
ಬಿಡುಗಣ್ಣಾಗಿ ನೋಡುವಷ್ಟು
ಅಷ್ಟು ದೊಡ್ಡ ಮರ

ಬೆಳಕು-ಮಳೆ-ಮಣ್ಣಿನ ಆಟದಲ್ಲಿ
ಬಯಸಿದ ಗರ ಬಿದ್ದಂತೆ
ಭರಭರ ಬೆಳೆದು ನಿಂತಿದೆ
ಅದೇ ಆ ದೊಡ್ಡ ಮರ

ಆ ಹಾದಿಯಲ್ಲಿ ಹಾರಿ ಹೋಗುವ
ಪ್ರತಿ ಹಕ್ಕಿಯೂ ತಿರುಗಿ ನೋಡುವಂತೆ
ಆ ಹಾದಿಯಲ್ಲಿ ಹಾದು ಹೋಗುವ
ಪ್ರತಿ ದಾರಿಹೋಕನು ಅದರ
ನೆರಳಿಗೆ ಆಶೆ ಪಡುವಂತೆ-
ಅಷ್ಟು ದೊಡ್ಡ ಮರ

ಊರ ಹೆಂಗಳೆಯರ
ಮುಡಿಗೇರುವುದದರ ಹೂವು
ಊರ ಮಂದಿಯ ಹಳೆಯ
ರೋಗಕ್ಕೂ ನಾಟುವುದು ಅದರ ಬೇರು
ಜಾತ್ರೆ, ಸಂತೆ, ವ್ಯಾಜ್ಯ, ಪುರಾಣ,
ಪ್ರವಚನ, ಹಬ್ಬ, ಹಾದರ, ಮದುವೆ,
ಮರಣ, ಸಕಲಕ್ಕೂ ಸಂಗಮ ಸ್ಥಳ

ಅದೇ ಆ ದೊಡ್ಡ ಮರ

ಇದೀಗ...
ಗೇಣುದ್ದ ಹಕ್ಕಿಯ ಹಿಕ್ಕೆಯ ಮೂಲಕ
ಈ ಮರದ ಅಂದ-ಚಂದ-ಗಂಧ
ಯಾವುದೋ ದೇಶದಲ್ಲಿ...
ಯಾವುದೋ ವೇಷದಲ್ಲಿ...
ಎಷ್ಟು ಸೋಜಿಗ!

## ಬಾಗು

ಬಾಗಿದೆ ಕೊಳದೊಳಗೆ-
ಕಮಲಗಳು
ಚಂದ್ರ, ನಕ್ಷತ್ರ ಗಣಗಳು

ತುತ್ತ ತುದಿಯೇರಿ ಬೆಟ್ಟ
ಬಾಗಿದೆ-
ಮನೆಗಳು, ಮರಗಳು
ಮಕ್ಕಳ ಆಟಿಕೆಯ ಹಾಗೆ
ಅಪರೂಪದ ಕಲಾವಿದ
ಬಿಡಿಸಿದ ಚಿತ್ರದ ಹಾಗೆ

ಹೆಮ್ಮರಗಳಡಿ ಬಾಗಿದೆ
ಪ್ರೇಮ ಪುಷ್ಪಗಳು
ಪಕ್ವವಾದ ಹಣ್ಣುಗಳು

ಬಾಗಿದೆ-
ಕಲ್ಲು ದೇವರ ಮುಂದೆ
ಬೆಳಗುವ ದೀಪಗಳಡಿ
ಅಹಂಕಾರವ ಸುಟ್ಟು
ಬಾಗುವುದೆ ಭಾಗ್ಯವೆನಿಸಿ
ಬಾಗಿ ಬಾಗಿ
ಬಾಗಿದುದನೆ ಅನವರತ

ಧೇನಿಸಿ ತಲೆ ಎತ್ತಿದರೆ
ಮೃತ್ಯು!
ಸರಕ್ಕನೆ ಬಾಗಿದೆ
ನಿಜವಾಗಿಯೂ...

## ಚಿತೆಗೇರಲಿಲ್ಲ ಹೂವುಗಳು

ಗಾಳಿ ತಂದಿತು
ದೀಪವಾರಿದ ಸುದ್ದಿ

ಒಂದು ಚಣ ಮೌನ
ನೋಡು ಎಂದಿತು ಹೃದಯ
ಬೇಡವೆಂದಿತು ಮನಸು

ನಿಮ್ಮ ಚಿತೆಗೇರಿಸಬೇಕೆಂದು
ಕೊಂಡಿದ್ದ ಎರಡು ನಸು ಹಳದಿ
ಗುಲಾಬಿ ಮೊಗ್ಗುಗಳು
ಇನ್ನೂ ಹಾಗೆಯೇ ಇವೆ
ನಳನಳಿಸುತ್ತಿವೆ ಹೂದಾನಿಯಲ್ಲಿ

ಸದ್ಯ ಬೂದಿಯಾಗಲಿಲ್ಲ
ಹೂವುಗಳು...
ಏನೋ ಸಮಾಧಾನ

ನಿಮ್ಮನ್ನು ದ್ವೇಷಿಸುತ್ತಲೇ
ಪ್ರೀತಿಸಿದೆವು ನಾವು
ನೀವೇ ಕಲಿಸಿದ ಪಾಠ
ವೈಭವೀಕರಿಸಲಾರೆ ನಿಮ್ಮ ಸಾವು

ಉಳಿದಷ್ಟು ದಿನ
ಉಳಿದೇ ಉಳಿಯುವುದು
ಅಗಲಿಕೆಯ ನೋವು.

(ಪಿ. ಲಂಕೇಶ್‌ಗೆ ಶ್ರದ್ಧಾಂಜಲಿ)

## ಮುಂದೆ ಸಾಗುವ ಮುನ್ನ

ಮುಂದೆ ಸಾಗುವ ಮುನ್ನ
ಹಿಂದೆ ನೋಡಬಾರದೆ ಒಮ್ಮೆ
ನದಿಯಲ್ಲವೇ ನಾನು
ತುದಿಯಲ್ಲಿರುವೆ ನೀನು
ನಿಲ್ಲು ನಿಲ್ಲು ನೀ ನನ್ನ ಮಗಳೆ...

ಹಿಟ್ಟು-ರೊಟ್ಟಿಯ ಸುಡುತ
ಹರಕೆ-ಮುಡಿಪುಗಳನಿಡುತ
ತಿಳಿದ ಹಾಡುಗಳ ಹಾಡಿ
ನೂರು ದೇವರ ಕಾಡಿ
ನಿನ್ನ ಪಡೆದೆ

ಉಟ್ಟ ಸೀರೆಯೇ ಮೂರು
ಹಣೆಗೆ ಕುಂಕುಮದ ಚೂರು
ಎದೆಗವಚಿಕೊಂಡೇ ನಿನ್ನ
ರಂಗೋಲೆಯ ಬರೆದೆ

ದೇಶ ನೋಡಲೇ ಇಲ್ಲ
ಕೋಶ ಓದಲೇ ಇಲ್ಲ
ಕಾಡ ಕಣಗಿಲೆ ನಾನು
ಚಿಗುರು ಕೆಂಪೆಲೆ ನೀನು
ಆಚೆ ದಡದಲ್ಲೇನಿದೆಯೋ
ನಾನೇನು ಬಲ್ಲೆ?

ನಿನ್ನ ಆಶೆಯೇ ಬೇರೆ
ನನ್ನ ಭಾಷೆಯ ಬೇರೆ
ಬೇರೆಲ್ಲವೇ ನಾನು
ಹೂವಲ್ಲವೇ ನೀನು
ತಿರುಗಿ ನೋಡೊಮ್ಮೆ ನನ್ನ ಮಗಳೆ...

# ನಿನ್ನೊಂದಿಗೆ ಮಾತನಾಡಲಾರೆ...

ನಿನ್ನೊಂದಿಗೆ ಮಾತನಾಡಲಾರೆ...
ಮುತ್ತು, ಸರ, ನತ್ತು, ವಾಲೆ,
ಝುಮುಕಿಯೊಡನೆ ಮಾತಾಡುವೆ

ಸೌದೆ, ಇದ್ದಿಲು, ಬೆಂಕಿ,
ನೀರು, ಕೊಡ, ರಾಟೆಯೊಡನೆ ಮಾತಾಡುವೆ

ಬೇಯಿಸಿದ ಹಿಟ್ಟು-ರೊಟ್ಟಿ,
ದೋಸೆ-ಪಲ್ಯದ ಜೊತೆ ಮಾತಾಡುವೆ

ನಿನ್ನೊಂದಿಗೆ ಮಾತನಾಡಲಾರೆ

ಜಾಜಿ, ಮಲ್ಲಿಗೆ, ಸಂಪಿಗೆ,
ಸೀಬೆ, ಮಾವು, ನೇರಳೆಯ ಜೊತೆ ಮಾತಾಡುವೆ

ನಾಯಿ, ಬೆಕ್ಕು, ಎಮ್ಮೆ, ಎತ್ತು,
ಬಾಗಿಲು, ಕಿಟಕಿ, ಹುಲ್ಲು ಮಾಡಿನ
ಜೊತೆ ಮಾತಾಡುವೆ

ಪೈರು, ತೆನೆ, ಕವಣೆ, ಕೋಲು,
ಬೆದರು ಬೊಂಬೆಯೊಡನೆ ಮಾತಾಡುವೆ

ನಿನ್ನೊಂದಿಗೆ ಮಾತನಾಡಲಾರೆ

ಬೆವರು, ಹಸಿವು,
ಬಯಕೆ, ಬೇನೆಯೊಂದಿಗೆ ಮಾತಾಡುವೆ

ದೀಪ, ಧೂಪ, ಹೂವು, ಗಂಧ,
ಕಲ್ಲು ದೇವರೊಂದಿಗೆ ಮಾತಾಡುವೆ

ನನಗೆ ನಾನೇ, ನನಗೆ ನಾನೇ ಮಾತಾಡುವೆ
ನಿನ್ನೊಂದಿಗೆ...ಉಹುಂ ಮಾತನಾಡಲಾರೆ.

# ಮತ್ತೆ ಹುಟ್ಟುವುದಾದರೆ...

ಮತ್ತೆ ಹುಟ್ಟುವುದಾದರೆ
ಈ ನೆಲವೇ ಇರಲಿ
ಹುಟ್ಟಿದ ಮೇಲೆನ್ನ ನುಡಿಯು
ಕನ್ನಡವೇ ಆಗಿರಲಿ

ತುಂಗೆಯಲಿ ನಾನಿರಲು
ಗಂಗೆಯೂ ಬರಲಿ
ಕೃಷ್ಣೆ-ಗೋದಾವರಿ
ಗೆಳತಿಯರು ಸಿಗಲಿ

ಹಿಮಾಲಯವು ಮುಡಿಯಲ್ಲಿ
ಸಹ್ಯಾದ್ರಿಯು ಅಡಿಯಲ್ಲಿ
ಅಲ್ಲಲ್ಲಿಯೇ ಇರಲಿ
ಕಲ್ಕತ್ತೆಯ ಕಾಳಿ
ಶೃಂಗೇರಿಯ ಶಾರದೆಗೆ
ಹೂವು-ಕುಂಕುಮ ಕೊಡಲಿ
ದೂರದಲ್ಲೇಕೆ ಇರಬೇಕು ದೆಹಲಿ
ಶಿವಮೊಗ್ಗೆಗೇ ಬರಲಿ

ಮತ್ತೆ ಹುಟ್ಟುವುದಾದರೆ
ಈ ನೆಲವೇ ಇರಲಿ
ಮಂಗಳೂರಿನ ಕಡಲು
ಮಡಿಕೇರಿಯ ಮಂಜಿನೊಡಲು
ನನಗೊದಗಿ ಬರಲಿ

ಹಟ್ಟಿ ಚಿನ್ನದ ಬುಗುಡಿ
ಕಾರವಾರದ ಸೀಗಡಿ
ತುಟ್ಟಿಯಾಗದೇ ಇರಲಿ

ಕಾಡು ಲಿಲ್ಲಿ ಹೂವುಗಳು/೨೫೭

ಸೊರಗದಿರಲಿ ಬೇಲೂರಿನ ಬಾಳೆ
ಒಣಗದಿರಲಿ ಜೋಗದ ಮೋರೆ
ಇಳಕಲ್ಲಿನ ಸೀರೆಗೆ
ಕಾಶ್ಮೀರದಲ್ಲೂ ಬೆಲೆ ಸಿಗಲಿ

ಮತ್ತೆ ಹುಟ್ಟುವುದಾದರೆ
ಈ ನೆಲವೇ ಇರಲಿ
ಮೇಲುಕೋಟೆಯ ಚೆಲುವ
ನನಗೊಲಿದು ಬರಲಿ

# ಆನೆ ಪೊಡಮಟ್ಟಿತು

ಕೊಳದೊಳಗಣ
ಚಂದ್ರನನು ಆನೆ ಮೆಟ್ಟಿತು
ನರಕದ ಬಾಗಿಲನು
ತಾನೆ ತಟ್ಟಿತು
ಬಾ ಒಳಗೆ, ನನ್ನೊಳಗೆ
ಎಂದಿತು ಕೊಳದ ಕೆಸರು
ನೇವರಿಸಿತು, ಆವರಿಸಿತು
ಅಡಗಿತು ಆನೆಯ ಉಸಿರು

ಆನೆ ಘೀಳಿಟ್ಟಿತು
ದಶದಿಕ್ಕಿಗೂ ಮೊರೆಯಿಟ್ಟಿತು

ಕರುಣೆಯಿಂದಲೇ ಇದಿರುಗೊಂಡವು
ಕೇಡಿಗನನು ಕಮಲಗಳು
ಶ್ರೀ ಹರಿಯ ನೆನೆದು
ಹೂವಿನಂದದಿ ಹೆಣೆ ಹೆಣೆದು
ಕರಿರಾಜನ ಮುಟ್ಟಿದವು

ಹೂವಿನ ಹಗ್ಗವನೇ ಹಿಡಿದು
ತಾನೇ ದಡ ಮುಟ್ಟಿತು
ಆನೆ ಪೊಡಮುಟ್ಟಿತು.

## ಗಾಂಧಿ ಹುಟ್ಟಿದ್ದು

ಗಾಂಧಿ ಹುಟ್ಟಿದ್ದು
ನೆಟಾಲಿನ ರಾಜಧಾನಿಯಾದ
ಮೆರಿಟ್ಸ್ ಬರ್ಗ್‌ನಲ್ಲಿ
ರೈಲ್ವೆ ಪ್ಲಾಟ್ ಫಾರಂನಲ್ಲಿ
ಚೆಲ್ಲಾಪಿಲ್ಲಿಯಾದ
ಹಾಸಿಗೆ, ಪೆಟ್ಟಿಗೆ, ಕಾಗದಗಳ ನಡುವೆ

ಅಪರಾತ್ರಿ
ಹೊರಗೆ ಅಸಾಧ್ಯ ಚಳಿ
ಒಳಗೆ ಜ್ವಾಲಾಮುಖಿ
ನೋವಿನಿಂದ ಒದ್ದೆಯಾದ ಕಣ್ಣುಗಳು
ಮೈತುಂಬಾ ಅವಮಾನದ ಮುಳ್ಳುಗಳು...

ಚಳಿಗೆ ಸೆಟೆದ ಕಾಲುಗಳು
ದಂಡಿಗೆ ಸಿದ್ದವಾದದ್ದು
ಬೆಂಕಿ ಬೆಳದಿಂಗಳಾದದ್ದು
ಸತ್ಯಪ್ರೇಮ, ಅಹಿಂಸೆಯ
ದೀಕ್ಷೆ ಪಡೆದದ್ದು
ಎಲ್ಲಾ ಆ ಕ್ಷಣದಲ್ಲಿ...

# ನಮನ

ನಮಿಸುವೆನು ತಾಯೆ
ನಿನ್ನಡಿಗೆ
ಮುನ್ನಡೆಸು ನನ್ನೀ
ಜಗದೊಳಗೆ

ಬೆಟ್ಟವಾಗಿಸು ಎಂದು
ನಾನು ಬೇಡುವುದಿಲ್ಲ
ಚಿಟ್ಟೆಯಾಗಿಸು ನನ್ನ
ನಿನ್ನ ತೋಟದೊಳಗೆ

ಚುಕ್ಕಿಯಾಗಿಸು ಎಂದು
ನಾನು ಬೇಡುವುದಿಲ್ಲ
ಹಕ್ಕಿಯಾಗಿಸು ನನ್ನ
ಹಾರಿಕೊಂಡಿರುವೆ
ನೀಲ ಗಗನದೊಳಗೆ

ಸೂರ್ಯನಾಗಿಸು ಎಂದು
ನಾನು ಬೇಡುವುದಿಲ್ಲ
ದೀಪವಾಗಿಸು ನನ್ನ
ಉರಿದುಕೊಂಡಿರುವೆ
ಊರ ಗುಡಿಯೊಳಗೆ

ಕಡಲಾಗಿಸು ಎಂದು
ನಾನು ಬೇಡುವುದಿಲ್ಲ
ಮೀನಾಗಿಸು ನನ್ನ
ಈಜಿಕೊಂಡಿರುವೆ
ಕಣ್ಣ ಕೊಳದೊಳಗೆ

ದೇವನಾಗಿಸು ಎಂದು
ನಾನು ಬೇಡುವುದಿಲ್ಲ
ದಾಸನಾಗಿಸು ನನ್ನ
ಹಾಡಿಕೊಂಡಿರುವೆ
ಈ ಲೋಕದೊಳಗೆ

ಘನವಾಗಿಸು ಎಂದು
ನಾನು ಬೇಡುವುದಿಲ್ಲ
ಕಣವಾಗಿಸು ನನ್ನ
ಲಯವಾಗುವೆ ನಿನ್ನೊಳಗೆ.

## ನವೋದಯದ ನಲವು : ಜಿ ಎಸ್ ಎಸ್

ನವಿರಾದ ಭಾವದಲೆಗಳ
ಸೀಳುತ್ತಾ ಮುನ್ನುಗ್ಗುತ್ತಿತ್ತು
ನವ್ಯದ ಹಡಗು

ಆಹಾ! ಏನು ಬಿಂಕ, ಬೆಡಗು, ಬಿನ್ನಾಣ
ಕೋಡುಗಲ್ಲಿನ ಮೇಲೆ
ಕಡಲ ಹಕ್ಕಿಗಳಂತೆ ಕೂತು ನೋಡಿದೆವು.

ಕಾರಿರುಳು -
'ಕರಿಯ ನಭದ ಕಣ್ಣಗಳಂತೆ
ಅಭಯದೊಂದು ರೂಹಿನಂತೆ
ತೇಲಿಬಿಟ್ಟ ದೀಪದಂತೆ'
ನೂರು ತಾರೆ ಬೆಳಕ ಬೀರಲು
ಪುಟ್ಟ ದೋಣಿಯಲಿ ಕೂತು
ರಾತ್ರಿ-ಹಗಲು ರಾಕ್ಷಸ ಅಲೆಗಳನ್ನು ತಳ್ಳುತ್ತಾ
ಹರಸಾಹಸದಿಂದ ದಡ ಸೇರಿದೆವು.

ಮುಸ್ಸಂಜೆ-
ಆಗಸದಲ್ಲಿ ಬೆಳ್ಳಕ್ಕಿಗಳ ಸಾಲು
'ದೇವರ ರುಜು'
ಪರವಶತೆಯಿಂದ ನೋಡಿದೆವು.
ಕಣಿವೆಯ ಮುದುಕ
ಕೈ ಮರವಾದ ; ಮುನ್ನಡೆದೆವು.
'ಮೂಡಲ ಮನೆಯಲ್ಲಿ ಮುತ್ತಿನ ನೀರು
ಗಿಡಗಂಟೆಗಳ ಕೊರಳಲ್ಲಿ ಹಕ್ಕಿಗಳ ಹಾಡು'
ತಲೆದೂಗಿದೆವು.

ಶಾನುಭೋಗರ ಮಗಳು

ಕಾಲಿಗೆ ನೀರಿತ್ತು ಕೈತುತ್ತು ನೀಡಿದಳು;
'ಎನಿತು ಜನ್ಮದಲಿ ಎನಿತು ಜೀವರಿಗೆ
ಎನಿತು ನಾವು ಋಣಿಯೋ'ತಲೆಬಾಗಿದೆವು.

ಹಾದಿಯ ತುಂಬಾ
ನಗುತ್ತಿತ್ತು ಏಳುಸುತ್ತಿನ ಮಲ್ಲಿಗೆ
'ಹಚ್ಚನೆ ಹಸುರ ಗಿಡದಿಂದೆಂತು
ಮೂಡಿತ್ತೋ ಬೆಳ್ಳಗೆ'
-ಅನತಿ ದೂರದಲ್ಲೇ ಕಲ್ಲು ಬಂಡೆಯನ್ನೇರಿ
ಅದಾರೋ... ಯಾರವರು, ಯಾರು?
ಎದೆತುಂಬಿ ಹಾಡುತ್ತಿದ್ದರು.

ಹಮ್ಮು-ಬಿಮ್ಮು ಸೋಕದ ಹಾಡು
ನೊಂದ ಜೀವರಿಗೆ ತಂಪನೀಯುವ ಹಾಡು
ಪ್ರೀತಿ-ಸ್ನೇಹಗಳ ಪಸರಿಸುವ ಹಾಡು
ಎಲ್ಲೋ ಅಳುವ ಮಗುವನೂ ಸಂತೈಸುವ ಹಾಡು
ನವ-ನವೀನ ಭಾವದ ಹಾಡು.

ಹಾಡಿನ ಹಾಡಿಯಲಿ ಬೀಡುಬಿಟ್ಟು
ಹಾಡಿಗೆ ನಮ್ಮನ್ನೇ ನಾವು ಕೊಟ್ಟು ಕೊಂಡೆವು
ನೂರು ಭಾವದ ಬಾವಿ ಮೊಗೆ ಮೊಗೆದು
ಸಿಹಿನೀರ ಕುಡಿದೆವು.

ಕಡಲನೀಜುವೆನೆಂಬ ಮರುಳ ಹಡಗು
ತನಗೆ ತಾ ಹೊರೆಯಾಗಿ ತಾನೆ ಮುಳುಗುತ್ತಿತ್ತು...
ಅಲೆಯ ಮೇಲೊಂದು ತಾವರೆಯ ಎಲೆ
ಎಲೆಯ ಮೇಲೊಂದು ಪುಟ್ಟ ಹಣತೆ
ತೇಲುತ್ತಿತ್ತು ತನ್ನ ಪಾಡಿಗೆ ತಾನೇ
ನೀಲ ಮೌನದಲ್ಲಿ...

## ಜಾಗತೀಕರಣದ ಹೊಸಿಲಲ್ಲಿ ನಿಂತಿರುವ ರೈತನಿಗೊಂದು ಕಿವಿಮಾತು

ಯಾವಾಗ ನೋಡಿದ್ರೂ
ಜರಿಶಾಲು, ರೇಷ್ಮೆ ಪೇಟ
ದೀಪಾ-ಧೂಪಾ
ಹೂವು-ಹಾರ ಜೊತೆಗೆ
ನಾಯಕರ ನಗೊ ಮುಖ
ಹೊತ್ಕೊಂಡು ಬರ್ತಾ ಇದ್ದ
ಪೇಪರ್‌ನಾಗೆ ನಿನ್ನ
ಸುದ್ದಿನೂ ಓದ್ದೇ ಕಣಪ್ಪಾ...

ದಿಕ್ಕಿಲ್ಲದಂಗೆ ರಾಶಿ ಬಿದ್ದಿದ್ದ
ಟೊಮೊಟೊ, ಆಲೂಗಡ್ಡೆ, ಮೆಕ್ಕೆಜೋಳದ
ಜತೆಗೆ ಕಂಗಾಲಾಗಿ ಕೂತಿದ್ದ
ನಿನ್ನ ಚಿತ್ರಾನೂ ಮುಖಪುಟದಾಗೆ
ನೋಡ್ದೆ ಕಣಪ್ಪಾ

ಅಲ್ಲಾ ಕಣಪ್ಪಾ...
ಭಾರತಾಂಬೆಯ ಬೆನ್ನೆಲುಬು
ಅಂತ ಯಾಮಾರಿ ಕುಂತಿದ್ಯಲ್ಲಾ
ಈಗ ನೋಡು...
ನೀ ಯಾರ ಅಂತ
ಕೇಳೋರು ಇಲ್ಲ...

ನೀ ಹತ್ತು ಪೈಸೆಗೆ ಮಾರೋದನ್ನ
ಹತ್ತು ರೂಪಾಯಿಗೆ ತಕ್ಕೊಳೋ
ನಾ ಹೇಳ್ತೀನಿ ಕೇಳು...

ನೀ ಹೆದರಬೇಡ
ಇಲಿ ಪಾಷಾಣ
ಕೀಟ ನಾಶಕ ಕುಡ್ದು
ಜೀವ ತಕ್ಕೊಬ್ಯಾಡ

ಭೂಮಿ-ಕಾಣಿ, ಮಳೆ-ಬೆಳೆ
ಎಲ್ಲಾ ಮರ್ರು ಬಿಡು
ನೀ ಬಿತ್ತೋದೂ ಬ್ಯಾಡ
ನೀ ಬೆಳೆಯೋದೂ ಬ್ಯಾಡ
ಕೈ ಕೆಸರು ಮಾಡಿಕೊಳ್ಳೋದೂ ಬ್ಯಾಡ
ಬೆವರ ಸುರಿಸೋದೂ ಬ್ಯಾಡ
ನುಸಿ ಪೀಡೆ, ಕೀಟ ಬಾಧೆ, ಪೇಟೆ ಧಾರಣೆ
ಅಂತ ತಲೆಕೆಡಿಸಿಕೊಳ್ಳಬ್ಯಾಡ
ಅಕ್ಕಿ, ರಾಗಿ, ಕೊತ್ತಿಮಿರಿ, ಕರಿಬೇವು
ಎಲ್ಲಾ ಅಮೇರಿಕಾದಿಂದ ಬರುತ್ತೆ
ನೀ ಸುಮ್ಕಿದ್ದು ಬಿಡು ಆರಾಮ...

ಆ ಹಳೆ ಪಂಚೆ
ಹರಕಲು ಚಡ್ಡಿ
ಹವಾಯಿ ಚಪ್ಪಲಿ
ಮೋಟು ಬೀಡಿ ಮೊದ್ಲು ಬಿಸಾಕು
ಜೀನ್ಸ್ ಪ್ಯಾಂಟು, ರಂಗೀಲಾ ಷರಟು
ಮೊದ್ಲು ತೊಟ್ಕೊ...

ಪಿಜ್ಜಾ ತಿನ್ನು, ಕೋಲಾ ಕುಡಿ
ಪ್ಯಾಕ್‌ನಲ್ಲಿ ಮಡಗಿರೋ
ಚಿಕನ್ನು, ಮಟನ್ನು ತಿಂದು
ಪಾಪು, ರ‍್ಯಾಪು ಕೇಳ್ತಾ
ಟಿ. ವಿ. ನಲ್ಲಿ W.W.F ನೋಡ್ತಾ
ಮೊಬೈಲ್‌ನಲ್ಲಿ ಕಷ್ಟ-ಸುಖ

ಇಚಾರಿಸ್ತ ಸುಮ್ಕಿದ್ದು ಬಿಡು ಆರಾಮ...
ಹಾಂ...ಹಾಗೆ...ಹಾಗೆ...
ನೋಡ್ತಾ ಇರು ಹ್ಯಾಗೆ
ಹ್ಯಾಗೆ ಆಗುತ್ತೆ ಮ್ಯಾಜಿಕ್ಕು!
ನಿನ್ನೂರು ಮಂಗಾಪುರ ಅಲ್ವಾ?
ಈಗ ನೋಡು...
ಹ್ಯಾಗೆ ಆಗಿದೆ ಸಿಂಗಾಪುರ!

ನೋಡ್ತಾ ಇರು...
ಹೈಟೆಕ್ ಆಸ್ಪತ್ರೆ ಬತ್ತದೆ
ಯಮಗಾತ್ರ ಪವರ್ ಪ್ರಾಜೆಕ್ಟ್ ಬಂದು
ರಾತ್ರಿ-ಹಗಲು ದೀಪ ಉರೀತದೆ
ಕುಡಿಯೋ ನೀರು ಬಾಟ್ಲಿನಲ್ಲಿ
ತಂತಾನೆ ತುಂಬ್ಕೊಂಡು
ಮನೆ ಬಾಗಿಲಿಗೆ ಬಂದು ಬೀಳ್ತದೆ

ಎತ್ತಿನ ಬಂಡಿಗಳು
ಏರೋಪ್ಲೇನ್ ಥರಾ ಹಾರ್ಕೊತ
ಸೀದಾ ದಿಲ್ಲಿಗೇ ಹೋಗ್ಬೇಕು
ಆಪಾಟಿ ರಸ್ತೆಗೋಳು ಬತ್ತವೆ
ನಿನ್ನ ಮಕ್ಕಳು, ಮರಿಮಕ್ಕಳು
ದೊಡ್ಡ ದೊಡ್ಡ ಶಾಲೆಗೆ ಹೋಗ್ತಾವೆ
ಎ. ಬಿ. ಸಿ. ಡಿ ಕಲಿತಾವೆ
ಅಮೆರಿಕೆಗೆ ಹಾರಿ
ಕೊಪ್ಪರಿಗೆ ಹಣ ಬಾಚ್ತಾವೆ...

ಹೆಚ್ಚೆಟ್ಟು-ಛಾಪಾಕಾಗದ
ಸಾಲ, ಬಡ್ಡಿ, ಜಪ್ತಿ
ಉಹುಂ ಕನಸಿನಲ್ಲೂ ಯೋಚಿಸಬ್ಯಾಡ

ನೀ...ರಾಮ-ಕೃಷ್ಣ ಅನ್ನೋದು ಬ್ಯಾಡ
ಕಂಪ್ಯೂಟರ್ ದೇವತೆ
ನಿನ್ನ ಮೈಮ್ಯಾಲೆ ಬಂದು
ಖಂಡಿತ ಮೋಕ್ಷ ಕಾಣಿಸ್ತಾಳ...

ಅದಕ್ಕೆ ಕಣಪ್ಪಾ ನಾ ಹೇಳ್ತೀನೀ ಕೇಳು...
ನೀ ಸುಮ್ಕಿದ್ದು ಬಿಡು...
ಬಾಯ್ ಮುಚ್ಕೊಂಡು...ಕಿವಿ ಮುಚ್ಕೊಂಡು...
ಕಣ್ಣು ಮುಚ್ಕೊಂಡು...

ಹಾಂ ಹಾಗೆ...ಹಾಗೆ...
ಉಸಿರೆತ್ತಬ್ಯಾಡ....

# ಹೆಣ್ಣು ಜೀವ

ಸೋನೆ ಮಳೆಯ ಸಂಜೆ...
ಒಲೆಯ ಮೇಲೆ ಚಹಾ ಕುದಿಯುತ್ತಾ ಇತ್ತು
ದೀಪ ಹಚ್ಚಿ, ಧೂಪ ಹಾಕಿ, ದೇವರನು ಬೆಚ್ಚಗಾಗಿಸಿ
ಸ್ವೆಟರ್ ಏರಿಸಿ ಹಾಳೂರು..
ಎಂದು ಇಲ್ಲದ ಕರೆಂಟಿಗೆ ಬಾಯ್ತುಂಬ ಬಯ್ದು
ದೀಪ ಧಾರಿಣಿಯಾದೆ, ಗಾಳಿ ಬಾಗಿಲ ತಳ್ಳಿತು

ಎದುರಲ್ಲಿ ತೊಯ್ದು ತೊಪ್ಪೆಯಾಗಿ ನಿಂತಿತ್ತು ಹೆಣ್ಣು ಜೀವ
ಆತುಕೊಂಡಿದ್ದ ಎಳೆಯ ಕಂದಮ್ಮಗಳ ಜೋಡಿ
ಹಾಕಿದವು ಮೋಡಿ, ತುಸುವೆ ಮೆದುವಾಯಿತು ಭಾವ
ಕೇಳದೆಯೇ ಹೇಳದೆಯೇ
ಎಲ್ಲವೂ ಅರ್ಥವಾದಂತೆ, ಭಾಷೆಯ ಹಂಗಿಲ್ಲದೆ
ನೇರ ಹೃದಯವನೆ ಮುಟ್ಟಿದಂತೆ.

ಏನೂ ಮಾಡಲು ತೋಚದೆ...
ಆರಿ ಹೋಗಲಿದ್ದ ದೀಪಕ್ಕೆ ಅಡ್ಡ ಕೈ ಹಿಡಿದು
ಒಳಗೆ ಬಂದೆ, ಹೊರಗೆ ಹೋದೆ...
ದೀಪ ಹೊಯ್ದಾಡುತ್ತಾ ಇತ್ತು
ತೀರಿಕೊಂಡ ಅಜ್ಜಿ, ದೊಡ್ಡವ್ವ, ಶಕ್ಕು ....
ಯಾರೆಲ್ಲ ನಿಂತಂತಾಗಿ ಕಣ್ಣೆದುರು -
ಜಗುಲಿಯ ಮೂಲೆಗೆ ಗೋಣಿ ಹಾಸಿ
ಬಟ್ಟಲಿಗೆ ಬಿಸಿ ಹಾಲು ಅನ್ನ ಸುರಿದು
ಬಾಗಿಲು ಮುಚ್ಚಿ ಕಿಟಕಿ ತೆರೆದೆ
ಇದೀಗ-
ಕಂದಮ್ಮಗಳು ಸಮರೋಪಾದಿಯಲ್ಲಿ
ಅವ್ವನ ಮೊಲೆಗೆ ಬಾಯಿಟ್ಟು

ಹಾಲು ಹೀರುತ್ತಿದ್ದವು
ತಾಯಿ ಬೆಚ್ಚಗೆ ಕಣ್ಮುಚ್ಚಿ ಮಲಗಿತ್ತು
ವಾಸನೆ ಹಿಡಿದು ತುಸುವೆ ಬಾಲ ಅಲ್ಲಾಡಿಸಿ

ನನ್ನ ಗುರುತಿಸಿತು!

## ಕನಕ-ಕೃಷ್ಣ

ಕನಕ ಕುರಿ ಕಾಯುತ್ತಿದ್ದ
ಕೃಷ್ಣ ದನ ಮೇಯಿಸುತ್ತಿದ್ದ
ಪರಿಚಯವಾಯಿತು ಹೆಚ್ಚೇನಿಲ್ಲ...

ಕನಕ ರೊಟ್ಟಿ ಒಯ್ಯುತ್ತಿದ್ದ
ಕೃಷ್ಣ ಬೆಣ್ಣೆ ಹಚ್ಚುತ್ತಿದ್ದ
ಹಂಚಿಕೊಂಡು ಉಂಡರು ಹೆಚ್ಚೇನಿಲ್ಲ...

ಕನಕನಿಗೆ ಹಾಡು ಕಟ್ಟುವ ಹುಚ್ಚು
ಕೃಷ್ಣನಿಗೆ ಕೊಳಲು ಅಚ್ಚುಮೆಚ್ಚು
ಗೆಳೆತನ ಕುದುರಿತು ಹೆಚ್ಚೇನಿಲ್ಲ...

ಕನಕ 'ಬ್ಯಾ' 'ಬ್ಯಾ' ಎಂದೂ
ಕೃಷ್ಣ 'ಅಂಬಾ' ಎಂದೂ
'ಕಿರ್ ಕಿರ್' 'ಮುರ್ ಮುರ್' ಕೂಗು ಹಾಕಿ
ಕೂಡಿ-ಆಡಿ ನಲಿದರು ಹೆಚ್ಚೇನಿಲ್ಲ...

ಕೃಷ್ಣ ಮಹಾತುಂಟ, ತುಡುಗ,
ತರಲೆ, ಜಗಳಗಂಟ...
ಕನಕ ಅವನ ಭಂಟ, ನೆಂಟ, ಸರ್ವಸ್ವ...
ಇಬ್ಬರೂ ಬದುಕಿ-ಬಾಳಿದರು ಹೆಚ್ಚೇನಿಲ್ಲ...

ಕುಲದ ನೆಲೆಯಲ್ಲ...ಕಾಲದ ಹಂಗಿಲ್ಲ...
ಕನಕ ಮಣ್ಣಾದ, ಕೃಷ್ಣ ಕಲ್ಲಾದ...
ಇದೊಂದು ಕಲ್ಲು -ಮಣ್ಣಿನ ಕತೆ ಹೆಚ್ಚೇನಿಲ್ಲ...

# ರೂಪ ಪ್ರಕಾಶನದ ಪ್ರಕಟಣೆಗಳು

| | | |
|---|---|---|
| ೧. | ಬೆಳಕಿನ ಧಮ್ಮ | ಪ್ರೊ. ಎಂ. ಮರಿಸ್ವಾಮಿ |
| ೨. | ವಿಜ್ಞಾನಿಗಳ ಲೋಕ | ಕೈವಾರ ಗೋಪಿನಾಥ್ |
| ೩. | ಆಕಾಶಯಾನ | ಕೈವಾರ ಗೋಪಿನಾಥ್ |
| ೪. | ಜೆಂಟ್ಸ್ ದ್ರೌಪತಿ ವಸ್ತ್ರಾಪಹರಣವು | ಎಚ್.ಎಲ್. ಕೇಶವಮೂರ್ತಿ |
| ೫. | ಹನುಮ ನಿನ್ನ ನಾಮ ಒಂದೇ | ಎಚ್.ಎಲ್. ಕೇಶವಮೂರ್ತಿ |
| ೬. | ಇದಿಯಮ್ಮ ಗೆಜ್ಜಲಟ್ಟಿ | ಹೊರೆಯಾಲ ದೊರೆಸ್ವಾಮಿ |
| ೭. | ಸಿನಿಮಾ ಸಿನಿಮಾ | ಜಿ.ಆರ್. ಸತ್ಯಲಿಂಗರಾಜು |
| ೮. | ಬಾಗ್‌ಬಹಾದುರ್‌ನ ಸಾವು | ಬಂಜಗೆರೆ ಜಯಪ್ರಕಾಶ್ |
| ೯. | ಕಥಾ ಸೌರಭ | ಈಶ್ವರ ಚಂದ್ರ |
| ೧೦. | ದೇಸೀ ಚಹರೆ | ಮಂಜುನಾಥ ಬೇವಿನಕಟ್ಟೆ |
| ೧೧. | ಬಹುರೂಪಿ | ಅದೀಬ್ ಅಖ್ತರ್ |
| ೧೨. | ಯಾರೇ ಕೂಗಾಡಲಿ | ಅದೀಬ್ ಅಖ್ತರ್ |
| ೧೩. | ಮಾರಿಗುಡಿ | ಕೃಷ್ಣಜನಮನ |
| ೧೪. | ಕಣ್ಣಾಚೆಗೆ | ಕಾಳೇಗೌಡ ನಾಗವಾರ |
| ೧೫. | ಪೂರ್ವನಿಶ್ಚಿತ ದೃಷ್ಟಿ ಕೋನಗಳು | ಬಿ.ವಿ. ವೀರಭದ್ರಪ್ಪ |
| ೧೬. | ಮಹರ್ | ರೆಜಿಯಾ ನಾವುಂದ |
| ೧೭. | ಕಳೆದ ಕಾಲದ ಪ್ರೇಯಸಿಯರಿಗೆ | ಬಂಜಗೆರೆ ಜಯಪ್ರಕಾಶ್ |
| ೧೮. | ಕಾಡು ಲಿಲ್ಲಿ ಹೂವುಗಳು | ಸವಿತಾ ನಾಗಭೂಷಣ |
| ೧೯. | ಬೇರು ಬಿಳಲು | ಡಿ.ಎಸ್.ನಾಗಭೂಷಣ |
| ೨೦. | ನಮ್ಮನೆ ನೆನಕೊ | ಹಿ.ಶಿ.ರಾಮಚಂದ್ರೇಗೌಡ |
| ೨೧. | ಕನಕದಾಸ ಸಾಂಸ್ಕೃತಿಕ ಅನುಸಂಧಾನ | ಸ್ವಾಮಿಗೌಡ |
| ೨೨. | The land of Buddhism | DR.Mangalamurthy.s |

ಮತ್ತು ಹಲವಾರು ನವ ಸಾಕ್ಷರರ ಪುಸ್ತಕಗಳು



ಸವಿತಾ ಮೂಲತಃ ಲಯಗಳ ಹುಡುಕಾಟದ ಕವಿ. ಇದನ್ನು ಸಾಂಗತ್ಯದ ಹುಡುಕಾಟವೆಂದೂ ಕರೆಯಬಹುದು. ಈ ಲಯ, ಸಾಂಗತ್ಯವೆನ್ನುವುದು ಸಿದ್ಧ ಸ್ಥಿತಿಯಲ್ಲವಲ್ಲ. ಅದೊಂದು ಸಾಧಿಸಿಕೊಳ್ಳಬೇಕಾದ ಸಂದರ್ಭ ಮತ್ತು ಮನಃಸ್ಥಿತಿ. ಈ ತನಕ ಪ್ರಕಟವಾಗಿರುವ ಅವರ ನಾಲ್ಕೂ ಸಂಕಲನಗಳಲ್ಲಿ ಈ ಹುಡುಕಾಟವೆನ್ನುವುದು ಸ್ಥಾಯಿ ಎನ್ನುವಂತೆ, ನಿರಂತರವಾಗಿ ನಡೆದಿದೆ. ಪ್ರಕೃತಿ- ಮನುಷ್ಯನ ನಡುವೆ ಸಾಧಿತವಾಗಬೇಕಿರುವ ಲಯ, ಸಂಬಂಧಗಳ ಬಿಕ್ಕಟ್ಟುಗಳ ನಡುವೆಯೇ ಕಟ್ಟಿಕೊಳ್ಳಬೇಕಾದ ಲಯ, ಬದುಕಿನ ಕನಸು- ವಾಸ್ತವಗಳ ನಡುವೆಯೇ ಕಟ್ಟಿಕೊಳ್ಳಬೇಕಾದ ಲಯ....ಈ ಎಲ್ಲವುಗಳನ್ನು ಇವರ ಕಾವ್ಯ ಹುಡುಕುತ್ತಲೇ....ಇದೆ.

ಹಾಗೆ ನೋಡಿದರೆ ಸವಿತಾರ ಕಾವ್ಯದ ಶೈಲಿಯಲ್ಲಿಯೂ ಈ ಹೊಸ ಲಯದ ಹುಡುಕಾಟವಿದೆ. ಅಭಿವ್ಯಕ್ತಿಯ ನಾಟಕೀಯ ಮಾದರಿಗಿಂತ ಸಾವಧಾನದ , ಸಂಯಮದ, ಕೆಲವೊಮ್ಮೆ ಸ್ವಗತದ ಲಯದಲ್ಲಿಯೂ ಈ ಕವಿ ನಂಬಿಕೆಯಿಟ್ಟಂತೆ ತೋರುತ್ತದೆ. ಕರುಳು ಕತ್ತರಿಸುವ ಅನುಭವದ ಘಳಿಗೆಗಳನ್ನಾಗಲಿ, ಬದುಕನ್ನು ಅರಳಿಸುವ ರೋಮಾಂಚನದ ಘಳಿಗೆಗಳನ್ನಾಗಲಿ, ಸವಿತಾ ಹಿಡಿಯುವುದು ಸಾವಧಾನದ ಸಂವಿಧಾನದಲ್ಲಿಯೇ !

–ಡಾ. ಎಂ.ಎಸ್. ಆಶಾದೇವಿ
(ಮುನ್ನುಡಿಯಿಂದ)

ರೂಪ
ಪ್ರಕಾಶನ
ಮೈಸೂರು